



# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ



# Karnataka Scout & Guide

*Monthly News Magazine*

Vol-14 September - 2016 Issue No. 09 ₹ 10/-

**"Not all of us can do great things. But, we can do small things with great love"**

**- Saint Mother Teresa**



ಸೆಪ್ಟೆಂಬರ್ 17ರಂದು ರಾಯಚೂರಿನ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಹೈದ್ರಾಬಾದ್-ಕರ್ನಾಟಕ ವಿಮೋಚನಾ ದಿನಚಾರಣೆಯ ಪಥಚಲನ ಕಾರ್ಯಕ್ರಮದಲ್ಲಿ ಉತ್ತಮ ಪ್ರದರ್ಶನ ನೀಡಿದ ಗೈಡ್ಸ್ ತಂಡಕ್ಕೆ ಸನ್ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ತನ್ವೀರ್ ಶೇಠ್ ಅವರು ಬಹುಮಾನ ನೀಡಿ ಗೌರವಿಸಿದರು.



ಆಗಸ್ಟ್ 15ರಂದು ಧಾರವಾಡ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಪಥಚಲನದಲ್ಲಿ ಭಾಗವಹಿಸಿ ಪ್ರಥಮ ಬಹುಮಾನ ಪಡೆದ ಸ್ಕೌಟ್ಸ್-ಗೈಡ್ಸ್ ತಂಡಗಳಿಗೆ ಶ್ರೀ ವಿನಯ ಕುಲಕರ್ಣಿ, ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರು ಪ್ರಶಸ್ತಿ ನೀಡಿ ಗೌರವಿಸಿದರು.




ಸೆಪ್ಟೆಂಬರ್ 25 ರಂದು ಬೆಂಗಳೂರಿನ ಶಾಂತಿಗೃಹದಲ್ಲಿ ಜರುಗಿದ 98ನೇ ರಾಜ್ಯ ಪರಿಷತ್ ಸಭೆಯ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀಮತಿ ಸರೋಜ. ವಿ. ನಾಯ್ಡು, ಉಪಾಧ್ಯಕ್ಷರು, ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು(ಸ್ಕೌ), ಶ್ರೀಮತಿ ಗೀತನಟರಾಜ್, ರಾಜ್ಯ ಆಯುಕ್ತರು (ಗೈ), ಶ್ರೀ ಚೆನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿ, ಶ್ರೀ ಪ್ರಭುದೇವ್ ಜೆ. ಚಿಗಟೇರಿ, ರಾಜ್ಯ ಕೋಶಾಧಿಕಾರಿ, ಶ್ರೀಮತಿ ಎಸ್.ಕೆ. ಪ್ರಭಾ, ಜಂಟಿ ರಾಜ್ಯ ಕಾರ್ಯದರ್ಶಿ(ಗೈ), ಶ್ರೀ ಎಂ.ಎಂ. ಲೋಂಡೆ, ಶ್ರೀ ಪಿ. ವಿಶ್ವನಾಥ್, ಶ್ರೀ ಕೆ. ತಿಮ್ಮಯ್ಯ, ಶ್ರೀ ಬಿ.ಹೆಚ್. ಗೋನಾಳ, ಉಪನಿರ್ದೇಶಕರು ಹಾಗೂ ಡಿ.ಸಿ.ಸಿ., ಶ್ರೀ ಜಿ.ಬಿ. ಮನ್ನಿಕೇರಿ, ಉಪನಿರ್ದೇಶಕರು, ಡಿ.ಸಿ(ಎಸ್) ಹಾಗೂ ಇತರ ಪದಾಧಿಕಾರಿಗಳನ್ನು ಕಾಣಬಹುದು.



ದಾವಣಗೆರೆ ಜಿಲ್ಲೆಗೆ ನೂತನವಾಗಿ ಆಗಮಿಸಿರುವ ಜಿಲ್ಲಾಧಿಕಾರಿಗಳಾದ ಶ್ರೀ ಡಿ.ಎಸ್. ರಮೇಶ್, ಭಾ.ಆ.ಸೇ ಅವರನ್ನು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಆಗಸ್ಟ್ 26ರಂದು ಭೇಟಿ ಮಾಡಿ ಸ್ವಾಗತಿಸಿದರು.



ಆಗಸ್ಟ್ 27ರಂದು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರದ ಆವರಣದಲ್ಲಿ ನಿರ್ಮಿಸುವ "ಯಾತ್ರಿ ನಿವಾಸ" ಕಟ್ಟಡದ ಗುದ್ದಲಿ ಪೂಜೆ ಕಾರ್ಯಕ್ರಮವನ್ನು ಶ್ರೀ ಹೆಚ್.ಎಸ್. ಶಿವಶಂಕರ್, ಮಾನ್ಯ ಶಾಸಕರು, ಹರಿಹರ, ಶ್ರೀ ಡಿ.ಎಸ್. ರಮೇಶ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು ನೆರವೇರಿಸಿದರು. ಚಿತ್ರದಲ್ಲಿ ಶ್ರೀ ಜಯಪ್ರಕಾಶ್ ಜೆ. ಚಿಗಟೇರಿ, ಶ್ರೀ ನೂರುಲ್ಲಾ, ಎ.ಎಸ್.ಓ.ಸಿ. / ವಾರ್ಡನ್ ಹಾಗೂ ಕೊಂಡಜ್ಜಿ ಗ್ರಾಮಸ್ಥರನ್ನು ಕಾಣಬಹುದು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*





**ಪರಿವಿಡಿ**






ಸಂಚಿಕೆಯ ವಾರ್ಷಿಕ ಚಂದಾ ರೂ. 100 / - ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39 ಅರಮನೆ ರಸ್ತೆ, ಬೆಂಗಳೂರು-560 001 ದೂ: 080-2226 0017, 2226 7470 ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್: www.bsgkarnataka.org
www.kondajjibasappa.org
www.kondajjibasappa.com

ನಮ್ಮ ಸಂಸ್ಥೆಯ ಫೇಸ್‌ಬುಕ್
The Bharat Scouts-Guides Karnataka



# ರಾಜ್ಯ ಮುಖ್ಯ ಆಯುಕ್ತರ ನುಡಿ

ಪ್ರಿಯ ಓದುಗ ಬಂಧುಗಳೇ

ಸಸ್ನೇಹ ನಮಸ್ಕಾರಗಳು

ಭಾರತದ ಮೇಲೆ ಮತ್ತೊಮ್ಮೆ ಭಯೋದ್ಪಾಕರ ದಾಳಿಯಾಗಿದೆ. ಸೆಪ್ಟೆಂಬರ್ ಹದಿನೆಂಟು, ಭಾನುವಾರ ಬೆಳಗಿನ ಜಾವ ನಾಲ್ಕು ಗಂಟೆಗೆ ಸಂಪೂರ್ಣವಾಗಿ ಶಸ್ತ್ರ ಸಜ್ಜಿತರಾಗಿದ್ದ ಪಾಕಿಸ್ತಾನಿ ಉಗ್ರಗಾಮಿಗಳು, ಕಾಶ್ಮೀರದ ಊರಿ ಸೇನಾನೆಲೆಯಲ್ಲಿ ನಮ್ಮ ಸೈನಿಕರ ಮೇಲೆ ದಾಳಿ ಮಾಡಿದ್ದಾರೆ. ಹದಿನೆಂಟು ಜನ ವೀರ ಸೈನಿಕರು ಹುತಾತ್ಮರಾದರು. ಜನವರಿಯಲ್ಲಿ, ಪಠಾಣ್ಕೋಟ್ ಸೇನಾನೆಲೆಯ ಮೇಲೆ ಆದ ಭಯೋದ್ಪಾದಕ ದಾಳಿಯ ನಂತರದ ಭೀಕರ ಘಟನೆಯಿದು. ನೆರೆಯ ರಾಷ್ಟ್ರಗಳು ಶಾಂತಿ, ಸೌಹಾರ್ದ ಮತ್ತು ಪರಸ್ಪರ ವಿಶ್ವಾಸದಿಂದ ಪ್ರಗತಿಯತ್ತ ನಡೆಯಬೇಕಾದ ಈ ಸಂದರ್ಭದಲ್ಲಿ ನಮ್ಮ ನೆರೆಯ ರಾಷ್ಟ್ರವು ಭಯೋದ್ಪಾದಕ ಕೃತ್ಯಕ್ಕೆ ಕುಮ್ಮಕು ನೀಡುತ್ತಿರುವುದು ಖೇದನೀಯ ಮತ್ತು ಖಂಡನೀಯ. ಭಾರತ ಸರ್ಕಾರವು ಸೂಕ್ತವಾದ ಉತ್ತರವನ್ನು ಖಂಡಿತ ನೀಡಲಿದೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಪರವಾಗಿ ಹಾಗೂ ವೈಯಕ್ತಿಕವಾಗಿ, ಹುತಾತ್ಮರಾದ ವೀರಯೋಧರಿಗೆ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತೇನೆ. ಅವರ ಕುಟುಂಬದವರು ತಮಗಾದ ಈ ದುಃಖವನ್ನು ಭರಿಸುವ ಶಕ್ತಿಯನ್ನು ದೇವರು ಅವರಿಗೆ ನೀಡಲೆಂದು ಪ್ರಾರ್ಥಿಸುತ್ತೇನೆ. ನಾವೆಲ್ಲರೂ ಒಗ್ಗಟಿನಿಂದ ಸರ್ಕಾರದ ನಿಲುವನ್ನು ಬೆಂಬಲಿಸಬೇಕು.



ಮಹಾತ್ಮ ಗಾಂಧೀಜಿಯವರ ಜಯಂತಿಯು ಆಕ್ಟೋಬರ್ ಎರಡನೆಯ ತಾರೀಖು. ನಮಗೆ ಬಹಳ ಮಹತ್ವದ ದಿನ. 1869 ರಲ್ಲಿ ಗುಜರಾತಿನ ಪೋರ್‌ಬಂದರ್‌ನಲ್ಲಿ ಜನಿಸಿದರು. ಭಾರತದ ಸ್ವಾಂತಂತ್ರ್ಯ ಸಂಗ್ರಾಮದಲ್ಲಿ ಗಾಂಧೀಜಿಯವರದು ಮಹತ್ವದ ಪಾತ್ರ. ಭಾರತೀಯರಿಗೆ ಸ್ವಾಭಿಮಾನವನ್ನು ತುಂಬಿ ಸಾಮ್ರಾಜ್ಯಶಾಹಿ ಬ್ರಿಟೀಷ್ ಸರ್ಕಾರದ ವಿರುದ್ದ ಸತ್ಯಾಗ್ರಹದ ಅಸ್ತ್ರವನ್ನು ಅವರು ಪ್ರಯೋಗಿಸಿದರು. ಅಹಿಂಸೆಯ ಶಕ್ತಿಯನ್ನು ಜಗತ್ತಿಗೆ ಸಾರಿದರು. ಇಂದಿನ ವಿಕ್ಷಿಪ್ತ ಪರಿಸ್ಥಿತಿಯಲ್ಲಿ ಗಾಂಧೀಜಿಯವರ ಅಭಿಪ್ರಾಯಗಳು, ವಿಚಾರಗಳು ನಮಗೆ ಮಾರ್ಗದರ್ಶಿಯಾಗಬೇಕು.



ಈ ತಿಂಗಳ ಐದನೇಯ ತಾರೀಖು ರಾಷ್ಟ್ರದಾದ್ಯಂತ "ಶಿಕ್ಷಕರ ದಿನ" ವನ್ನು ಆಚರಿಸಲಾಯಿತು. ನಮ್ಮ ಎರಡನೇ ರಾಷ್ಟ್ರಪತಿಗಳಾಗಿದ್ದ ಡಾ.. ಎಸ್. ರಾಧಾಕೃಷ್ಣನ್ ಅವರ ಜನ್ಮದಿನವದು. ಭಾರತೀಯ ತತ್ವಶಾಸ್ತ್ರ ಮತ್ತು ವೇದಾಂತದಲ್ಲಿ ಆಗಾಧವಾದ ಜ್ಞಾನ ಮತ್ತು ಅರಿವನ್ನು ಅವರು ಹೊಂದಿದ್ದರು. ಬಡಕುಟುಂಬದಲ್ಲಿ 05.09.1888 ರಂದು ಜನಿಸಿದ ಡಾ॥ ರಾಧಾಕೃಷ್ಣನ್ ಅವರು ತಮ್ಮ ಸತತ ಪರಿಶ್ರಮ ಮತ್ತು ಅಧ್ಯಯನದ ಮೂಲಕವಾಗಿ ಸಾರಸ್ವತ ಲೋಕದಲ್ಲಿ ಸಾಧನೆಯ ಉತ್ತುಂಗವನ್ನು ತಲುಪಿದರು.

1909 ರಲ್ಲಿ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ತತ್ವಶಾಸ್ತ್ರದ ಅಧ್ಯಾಪಕರಾಗಿ ಶೈಕ್ಷಣಿಕ ವೃತ್ತಿಯನ್ನು ಆರಂಭಿಸಿದ ಡಾ॥ ರಾಧಾಕೃಷ್ಣನ್ 1948 ರಲ್ಲಿ ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದಿಂದ ನಿವೃತ್ತರಾದರು. 1931 ರಲ್ಲಿ "ಲೀಗ್ ಆಫ್ ನೇಷನ್ಸ್"ನ ಅಂತರಾಷ್ಟ್ರೀಯ ಸಮಿತಿಯಲ್ಲಿ ಸದಸ್ಯರಾಗಿದ್ದರು. 1946–1952 ಅವಧಿಯಲ್ಲಿ ಯೂನೆಸ್ಕೋದಲ್ಲಿ ಭಾರತದ ಪ್ರತಿನಿಧಿಯಾಗಿದ್ದರು. 1949–1952 ವರೆಗೆ ಸೋವಿಯತ್ ಯೂನಿಯನ್‌ನಲ್ಲಿ ಭಾರತದ ರಾಯಭಾರಿಯಾಗಿದ್ದರು.

ಸಂವಿಧಾನ ಸಭೆಯ ಸದಸ್ಯರಾಗಿದ್ದ ಶ್ರೀ ರಾಧಾಕೃಷ್ಣನ್, ಭಾರತದ ಪ್ರಥಮ ಉಪಾಧ್ಯಕ್ಷರಾಗಿ 1962 ರ ತನಕ, ನಂತರ 1967 ವರೆಗೆ ಅಧ್ಯಕ್ಷರಾಗಿ ಸೇವೆಸಲ್ಲಿಸಿದರು. ಇಂಥ ಸಾಧಕರ ಜನ್ಮದಿನವನ್ನು ಶಿಕ್ಷಕರ ದಿನಾಚರಣೆಯನ್ನಾಗಿ ಆಚರಿಸುವುದು ಹೆಮ್ಮೆಯ ಸಂಗತಿ.

ನಮ್ಮ ಸಂಸ್ಕೃತಿಯಲ್ಲಿ ಗುರುಗಳಿಗೆ ಅಗ್ರಸ್ಥಾನವಿದೆ. ವೇದಗಳು ಗುರುವನ್ನು ದೇವರಿಗೆ ಸಮಾನರನ್ನಾಗಿಸುತ್ತದೆ. ಅದಕ್ಕೆ ತಕ್ಕಂತೆ ಶಿಕ್ಷಕರು ನಮ್ಮ ಬದುಕಿನ ಎಲ್ಲಾ ಹಂತಗಳಲ್ಲೂ ಅಪಾರ ಪ್ರಭಾವವನ್ನು ಬೀರುತ್ತಿದ್ದಾರೆ. ವ್ಯಕ್ತಿತ್ವ ನಿರ್ಮಾಣದ ಮೂಲಕ ಸಧೃಡ ಭಾರತವನ್ನು ರೂಪಿಸುವ ಕಾರ್ಯದಲ್ಲಿ ಇಂದು ಶಿಕ್ಷಕರು ತೊಡಗಿಕೊಂಡಿದ್ದಾರೆ. ಸ್ಕೌಟ್ ಚಳುವಳಿಯೊಂದಿಗೆ ಶಿಕ್ಷಕರದು ಅವಿನಾಭಾವದ ಸಂಬಂಧ. ಶಾಲಾ ಕಾಲೇಜುಗಳಲ್ಲಿ ಮಕ್ಕಳ ತಂಡಗಳನ್ನು ಸಂಘಟಿಸಿ ತರಬೇತಿಯನ್ನು ನೀಡಿ ಚಳುವಳಿಯ ಆಶಯವನ್ನು ಸಾಧ್ಯಗೊಳಿಸುವವರು ಅವರು. ಕರ್ನಾಟಕದಾದ್ಯಂತ ನಮ್ಮ ಜಿಲ್ಲಾ, ತಾಲ್ಲೂಕು, ಪಟ್ಟಣ ಘಟಕಗಳು ಶಿಕ್ಷಕರ ದಿನವನ್ನು ವಿಶಿಷ್ಟವಾಗಿ ಆಚರಿಸಿದ್ದಾರೆ.

ಕ್ರಿಸ್ತಪೂರ್ವ ಎಂಟನೇ ಶತಮಾನದಿಂದ ನಾಲ್ಕನೇ ಶತಮಾನದ ತನಕ ಗ್ರೀಸ್ ದೇಶದ ಒಲಂಪಿಯಾದಲ್ಲಿ ನಡೆಯುತ್ತಿದ್ದ ಕ್ರೀಡಾಸ್ಪರ್ಧೆಗಳಿಂದ ಸ್ಫೂರ್ತಿಗೊಂಡು ಆಧುನಿಕ ಒಲಂಪಿಕ್ ಚಳುವಳಿಯು ಕ್ರಿ.ಶ. 1894ರಲ್ಲಿ ಆರಂಭವಾಯಿತು. ಒಲಂಪಿಕ್ ಕ್ರೀಡಾಸ್ಪರ್ಧೆಗಳು ವಿಶ್ವಭ್ರಾತೃತ್ವ ಮತ್ತು ಸ್ನೇಹ, ಶಾಂತಿಯ ಸಂಕೇತವಾಗಿದೆ. ವಿಶ್ವದ ಎಲ್ಲ ರಾಷ್ಟ್ರಗಳು ಭಾಗವಹಿಸುವ ಈ ಸ್ಪರ್ಧೆಗಳು ಬಹುಸ್ಪರ್ಧಾತ್ಮಕ ಮತ್ತು ವೃತ್ತಿಪರವಾಗಿದೆ.

ಕಳೆದ ತಿಂಗಳು ಬ್ರೆಜಿಲ್‌ನ ರಿಯೋ ಡಿ ಜನಿರೊ ದಲ್ಲಿ ಜರುಗಿದ ಒಲಂಪಿಕ್ಸ್ ಸ್ಪರ್ಧೆಗಳು ಮತ್ತೊಮ್ಮೆ ವಿಶ್ವಾಸ, ಸ್ನೇಹ ಮತ್ತು ಭ್ರಾತೃತ್ವದ ಪ್ರಾಮುಖ್ಯವನ್ನು ಎತ್ತಿಹಿಡಿದಿದೆ. ಭಾರತದ 118 ಕ್ರೀಡಾಪಟುಗಳು ವಿವಿಧ ಸ್ಪರ್ಧೆಗಳಲ್ಲಿ ಭಾಗವಹಿಸಿದ್ದರು. ಒಟ್ಟಾರೆ, ನಮ್ಮ ಸಾಧನೆಯು ನಿರಾಶಾದಾಯಕ. ಮಹಿಳೆಯರ ಬ್ಯಾಡ್‌ಮಿಂಟನ್ ಸ್ಪರ್ಧೆಯಲ್ಲಿ ಕುಮಾರಿ ಪಿ.ವಿ.ಸಿಂಧು, ಬೆಳ್ಳಿ ಪದಕವನ್ನು, ಮಹಿಳೆಯರ ಕುಸ್ತಿಯಲ್ಲಿ ಕುಮಾರಿ ಸಾಕ್ಷಿ ಮಲ್ಲಿಕ್ ಅವರು ಕಂಚಿನ ಪದಕವನ್ನು ಗೆದ್ದರು. ಅಪರೂಪದ ಸಾಧನೆಯೆಂದರೆ ಮಹಿಳೆಯರ ಜಿಮ್ನಾಸ್ಟಿಕ್ಸ್‌ನಲ್ಲಿ ಕುಮಾರಿ ದೀಪಾ ಕರ್ಮಾಕರ್ ಅವರು ನಾಲ್ಕನೇಯ ಸ್ಥಾನವನ್ನು ಪಡೆದಿದ್ದು.

ಒಲಂಪಿಕ್ಸ್ ನಂತರ ಪ್ಯಾರಾಲಿಂಪಿಕ್ಸ್ ನಡೆಯುತ್ತದೆ. 1988 ರಿಂದ 2012 ವರೆಗೆ ಭಾರತ ಗೆದ್ದಿದ್ದು ಕೇವಲ ಮೂರು ಪದಕಗಳು. ಆದರೆ ಈಗ ರಿಯೋದಲ್ಲಿ ನಾಲ್ಕು ಪದಕಗಳು. ಈ ಸಾಧನೆ ಅನಿರೀಕ್ಷಿತ ಮತ್ತು ಹೆಮ್ಮೆ ಪಡೆವಂತಹದು. ಪ್ಯಾರಾಲಿಂಪಿಕ್ಸ್‌ನಲ್ಲಿ ದೈಹಿಕ ಸವಾಲಿಗೊಳಗಾದ ಕ್ರೀಡಾಪಟುಗಳು ಭಾಗವಹಿಸುತ್ತಾರೆ. ಹನ್ನೆರೆಡು ವರ್ಷಗಳ ಹಿಂದೆ ಅಥೇನ್ಸ್‌ನಲ್ಲಿ, ಜಾವಲೀನ್ ಎಸೆತದಲ್ಲಿ ಚಿನ್ನದ ಪದಕ ಗೆದ್ದಿದ್ದ ಶ್ರೀ ಜಜಾರಿಯ ಅವರು ಈಗ ಮತ್ತೆ ಚಿನ್ನದ ಪದಕವನ್ನೆ ಗೆದ್ದಿದ್ದಾರೆ. ಅವರಿಗೆ ಇರುವುದು ಒಂದೇ ಕೈ. ಕಡುಬಡತನದ ಕುಟುಂಬದಿಂದ ಬಂದಿರುವ ಶ್ರೀ ಮಾರಿಯಪ್ಪನ್ ತಂಗವೇಲು ಅವರಿಗೆ ಕಾಲು ಊನಗೊಂಡಿದೆ. ಮಾರಿಯಪ್ಪನ್ ಹೈಜಂಪ್‌ನಲ್ಲಿ ಚಿನ್ನ ಜಯಸಿದ್ದಾರೆ. ಶ್ರೀ ವರುಣ್ ಭಾಟೀಯ ಕಂಚು ಪದಕ ಗೆದ್ದಿದ್ದಾರೆ. ಮಹಿಳಾ ಶಾಟ್‌ಪುಟ್‌ನ ಎಫ್ 53ರ ವಿಭಾಗದಲ್ಲಿ ಶ್ರೀಮತಿ ದೀಪಾ ಮಲ್ಲಿಕ್ ಬೆಳ್ಳಿಯ ಪದಕ ಗೆದ್ದಿದ್ದಾರೆ. ಬೆನ್ನುಹುರಿಯಲ್ಲಿ ಗೆಡ್ಡೆಯಾದ್ದರಿಂದ ಮೂವತ್ತೊಂದು ಬಾರಿ ಶಸ್ತ್ರಚಿಕಿತ್ಸೆಗೆ ಒಳಗಾಗಿದ್ದ ದೀಪಾ ಮಲ್ಲಿಕ್ ಅವರು ಎಲ್ಲಾ ಪ್ರಮುಖ ಕ್ರೀಡಾಕೂಟದಲ್ಲಿ ಪದಕಗೆದ್ದ ಭಾರತದ ಮೊದಲ ಮಹಿಳೆ. ಈ ಸಾಧಕರೆಲ್ಲರೂ ನಮ್ಮ ಹೆಮ್ಮೆಯ ಸಂಕೇತವಾಗಿದ್ದಾರೆ.









ದೈನಂದಿನ ಪಾಠ ಮತ್ತು ಪ್ರವಚನದ ಜೊತೆಗೆ ಕ್ರೀಡೆಗೂ ಆದ್ಯತೆಯನ್ನು ನಾವು ನೀಡಬೇಕು ಆಗಲೇ ಮಕ್ಕಳ ಬೌದ್ಧಿಕ, ಮಾನಸಿಕ ಮತ್ತು ದೈಹಿಕ ಬೆಳವಣಿಗೆ. ತನ್ಮೂಲಕ ಸರ್ವತೋಮುಖ ಅಭಿವೃದ್ಧಿ ಸಾಧ್ಯವಾಗುತ್ತದೆ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಪರವಾಗಿ ನಾನು ಎಲ್ಲಾ ವಿಜಯಿ ಸ್ಪರ್ಧಿಗಳನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಮುಂಬರುವ ಸ್ಪರ್ಧೆಗಳಲ್ಲಿ ಭಾರತದ ಸಾಧನೆಯು ಇನ್ನೂ ಉತ್ತಮವಾಗಲಿ ಎಂದು ಹಾರೈಸುತ್ತೇನೆ.

"ಕಲ್ಕತ್ತಾದ ಸಂತ" ರೆಂದು ಪ್ರಸಿದ್ಧರಾದ ಮದರ್ ತೇರೆಸಾ ಅವರಿಗೆ ಸೆಪ್ಟೆಂಬರ್ ನಾಲ್ಕರಂದು ರೋಮನ್ ಕ್ಯಾಥೋಲಿಕ್ ಚರ್ಚ್ ಸಂತಪದವಿಯನ್ನು ನೀಡಿತು. ಆಗಸ್ಟ್ 1910 ರಲ್ಲಿ ಆಲ್ಬೇನಿಯದಲ್ಲಿ ಜನಿಸಿದ ತೇರೆಸಾ,

ಹದಿನೆಂಟನೆಯ ವಯಸ್ಸಿನಲ್ಲಿ ಧಾರ್ಮಿಕ ಬದುಕಿಗೆ ಅರ್ಪಿಸಿಕೊಂಡರು. 1929 ರಲ್ಲಿ ಮಿಶನರಿಯಾಗಿ ಭಾರತಕ್ಕೆ ಬಂದು 1946 ರಲ್ಲಿ "ಮಿಶನರಿಸ್ ಆಫ್ ಚಾರಿಟಿ" ಸಂಸ್ಥೆಯನ್ನು ಸ್ಥಾಪಿಸಿದರು. ಹಸಿವಿನಿಂದ, ಮನೆಯಾಗಲಿ, ವಸ್ತ್ರವಾಗಲಿ ಇಲ್ಲದ, ಯಾರಿಂದಲೂ ಪ್ರೀತಿ ವಿಶ್ವಾಸವನ್ನು ಗಳಿಸದ, ಸಮಾಜದಿಂದ ಪರಿತ್ಯಕ್ತರಾದ ಜನರಿಗೆ ಅವರ ಸಂಸ್ಥೆಯಲ್ಲಿ ಬದುಕಲು ಅವಕಾಶ ಮಾಡಿಕೊಟ್ಟರು. ಮಕ್ಕಳಿಗೆ, ಕುಷ್ಠರೋಗದಿಂದ ನರಳುವವರಿಗೆ, ಸಾವಿನಂಚಿನಲ್ಲಿರುವ ಅನಾಥರಿಗೆ ಆಶ್ರಯವನ್ನು ಅವರ "ಸಿಸ್ಟರ್ಸ್ ಆಫ್ ಚಾರಿಟಿ" ಸಂಸ್ಥೆಯು ಒದಗಿಸಿತು. "ಭಾರತ ರತ್ನ"ವೂ ಸೇರಿದಂತೆ ಹಲವಾರು ಪ್ರಶಸ್ತಿಗಳು ಮದರ್ ತೇರೆಸಾರವರಿಗೆ ಸಂದಿದೆ. ಈಗ ರೋಮನ್ ಕ್ಯಾಥೋಲಿಕ್ ಚರ್ಚ್, ತೇರೆಸಾ ಅವರಿಗೆ ಸಂತ ಪದವಿಯ ಗೌರವವನ್ನು ನೀಡಿದೆ. ಈ ಘಟನೆಯು ಭಾರತಕ್ಕೆ ಮತ್ತು ತೇರೆಸಾ ಅವರ ಸೇವೆಗೆ ಸಂದಗೌರವ. ಮದರ್ ತೇರೆಸಾ ಅವರು ದುರ್ಬಲರಿಗೆ ಮಾಡಿರುವ ಸೇವೆಯಿಂದ ನಾವು ಸ್ಫೂರ್ತಿಯನ್ನು ಪಡೆದುಕೊಳ್ಳೋಣ. ಸ್ಕೌಟ್ಸ್ ಚಳವಳಿಯ ಮೂಲ ಮಂತ್ರವೇ ಸೇವೆಯಾಗಿರುವುದರಿಂದ ಇದು ನಮಗೆ ಹೆಚ್ಚಿನ ಶಕ್ತಿಯನ್ನು ತುಂಬಬೇಕು.





ಮುಂದಿನ ತಿಂಗಳು ನಾಡಹಬ್ಬ ದಸರಾ ನಡೆಯಲಿದೆ. ಜಲಸಂಕಷ್ಟದ ನೆರಳಿನಲ್ಲಿ ದಸರಾ ಆಚರಣೆಯಾಗುತ್ತಿದೆ. ಕರ್ನಾಟಕದ ಸಾಂಸ್ಕೃತಿಕ ಶ್ರೀಮಂತಿಕೆಯ ಪ್ರತಿಬಿಂಬ ದಸರಾ. ಮೈಸೂರಿನಲ್ಲಿ ಜಂಬೂಸವಾರಿಯ ಮೆರವಣಿಗೆ ಅಕ್ಟೋಬರ್ 11ರಂದು ನಡೆಯಲಿದೆ. ಅಲ್ಲದೆ ನಮ್ಮ ಸಂಸ್ಥೆಯ ಸದಸ್ಯರು ಸೇವಾ ಕಾರ್ಯವನ್ನೂ ಕೈಗೊಳ್ಳುತ್ತಾರೆ. ಮೆರವಣಿಗೆಯಲ್ಲಿ ಸ್ತಬ್ದಚಿತ್ರವೊಂದನ್ನು ಪ್ರದರ್ಶಿಸುವ ಪ್ರಯತ್ನವನ್ನೂ ಮಾಡುತಿದ್ದೇವೆ. ಎಲ್ಲರಿಗೂ ದಸರಾ ಹಬ್ಬದ ಶುಭಾಶಯಗಳು.

ಸೆಪ್ಟೆಂಬರ್ 8 ರಂದು ಕರ್ನಾಟಕದ ಸನ್ಮಾನ್ಯ ಮುಖ್ಯಮಂತ್ರಿ ಮತ್ತು ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಧ್ಯಕ್ಷರಾದ ಶ್ರೀ ಸಿದ್ದರಾಮಯ್ಯನವರ ಜೊತೆಯಲ್ಲಿ ನಾನು ಭಾರತದ ರಾಷ್ಟ್ರಪತಿ ಸನ್ಮಾನ್ಯ ಶ್ರೀ ಪ್ರಣಬ್ ಕುಮಾರ್ ಮುಖರ್ಜಿಯವರನ್ನು ದೆಹಲಿಯಲ್ಲಿ ಭೇಟಿ ಮಾಡಿದ್ದೆ. ಡಿಸೆಂಬರ್ 29 ರಿಂದ ಆರಂಭವಾಗುವ 17ನೇಯ ರಾಷ್ಟ್ರೀಯ ಜಾಂಬೂರಿಯನ್ನು ಉದ್ಘಾಟಿಸಲು ಘನವೆತ್ತ ರಾಷ್ಟ್ರಪತಿಗಳನ್ನು ಕೋರಿಕೊಳ್ಳಲಾಯಿತು. ಅವರು ಕಾರ್ಯಕ್ರಮಕ್ಕೆ ಆಗಮಿಸುವ ಭರವಸೆಯನ್ನು ನೀಡಿದ್ದಾರೆ. ರಾಷ್ಟ್ರಪತಿಗಳೊಂದಿಗೆ ನಡೆದ ಭೇಟಿ ತುಂಬಾ ಸೌಹಾರ್ದಯುತವಾಗಿ ಮತ್ತು ಫಲಪ್ರದವಾಗಿತ್ತು. ಸನ್ಮಾನ್ಯ ಶ್ರೀ ಕೊಂಡಜ್ಜಿ ಬಸಪ್ಪನವರ ಜೀವನ ಚರಿತ್ರೆಯ ಪುಸ್ತಕವನ್ನು ರಾಷ್ಟ್ರಪತಿಗಳಿಗೆ ನೀಡಿದಾಗ ಶ್ರೀ ಕೊಂಡಜ್ಜಿ ಬಸಪ್ಪನವರನ್ನು ತಾವು ಚೆನ್ನಾಗಿ ಬಲ್ಲರೆಂದು ಮತ್ತು ಇಬ್ಬರೂ ಒಟ್ಟಿಗೆ ಸೆಪ್ಟೆಂಬರ್ 3 1973ರಲ್ಲಿ ಕೇಂದ್ರ ಸರ್ಕಾರದಲ್ಲಿ ಸಹಾಯಕ ಸಚಿವರಾಗಿ ಪ್ರಮಾಣವಚನ ಸ್ವೀಕರಿಸಿದೆವು" ಎಂದು ತಿಳಿಸಿದರು. ಅಲ್ಲದೆ, ಹೆಮ್ಮೆಯಿಂದ ತಾವು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪ್ರಧಾನ ಪೋಷಕರು ಎಂಬುದನ್ನು ಹೇಳಿದರು.

ಜಾಂಬೂರಿಗೆ ಸಿದ್ಧತೆಗಳು ನಡೆಯುತ್ತಿವೆ. "Together for Better Tommorrow" "ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ" ಎಂಬುದು ಧ್ಯೇಯ ವಾಕ್ಯವಾಗಿದೆ. ಪ್ರಥಮ ಮಾಹಿತಿ ಸುದ್ದಿಪತ್ರವನ್ನು ಈಗಾಗಲೇ ಬಿಡುಗಡೆ ಮಾಡಿದ್ದೇವೆ. ವಿವಿಧ ರಾಜ್ಯಗಳಿಂದ / ವಿವಿಧ ರಾಷ್ಟ್ರಗಳಿಂದ ಜಾಂಬೂರಿಗೆ ಬರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಅಗತ್ಯವಾದ ಮಾಹಿತಿಯನ್ನು ಒದಗಿಸಿದ್ದೇವೆ. ಜೊತೆಗೆ ಜಾಂಬೂರಿಯ ಚಿಹ್ನೆಯನ್ನು ಅಂತಿಮಗೊಳಿಸಲಾಗಿದೆ. ಸ್ಕೌಟ್ ಚಿಹ್ನೆಯನ್ನುಳ್ಳ, ಜಾಂಬೂರಿಯ ಧ್ಯೇಯ ವಾಕ್ಯವನ್ನು ಒಳಗೊಂಡ, ತ್ರಿವರ್ಣದೊಳಗೆ ಭವ್ಯವಾದ



ಮೈಸೂರು ಅರಮನೆಯ ಚಿತ್ರವೂ ಮತ್ತು ಗಂಡಭೇರುಂಡ ಪಕ್ಷಿಯ ಚಿತ್ರವಿದೆ. ಆಕರ್ಷಣೀಯವಾದ ಈ ಚಿಹ್ನೆಯು ಜಾಂಬೂರಿಯನ್ನು ಯಶಸ್ಸಿನ ಕಡೆಗೆ ಒಯ್ಯುವುದರಲ್ಲಿ ಸಂದೇಹವಿಲ್ಲ. ಈ ಸುಂದರವಾದ ಚಿಹ್ನೆಯನ್ನು ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಗಾಗಿ ಕರ್ನಾಟಕದ ಪ್ರಸಿದ್ಧ ಕಲಾವಿದರಾದ ಶ್ರೀ ಚಂದ್ರಶೇಖರ ಗುಬ್ಬಿಯವರು ರಚಿಸಿದ್ದಾರೆ. ಶ್ರೀ ಗುಬ್ಬಿಯವರನ್ನು ನಾನು ಹಾರ್ದಿಕವಾಗಿ ಅಭಿನಂದಿಸುತ್ತೇನೆ. ಅತಿಥೇಯರಾದ ನಾವುಗಳು ತುಂಬು ಶ್ರದ್ಧೆಯಿಂದಲೂ, ಬದ್ಧತೆಯಿಂದಲೂ, ಒಗ್ಗಟ್ಟಿನಿಂದ ಶ್ರಮಿಸಬೇಕಾದ ಅಗತ್ಯವಿದೆ.

ಈ ವರ್ಷದ ರಾಷ್ಟ್ರೀಯ ಪದಕ ಪಟ್ಟಿಯನ್ನು ನವದೆಹಲಿಯ ಕೇಂದ್ರ ಕಛೇರಿಯು ಘೋಷಿಸಿದೆ. ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದರಾಮಯ್ಯ ನವರು, ಡಾ॥ ಗೊ.ರು. ಚನ್ನಬಸಪ್ಪನವರು, ಶ್ರೀಮತಿ ಸರೋಜ ವಿ. ನಾಯ್ಡು ಅವರುಗಳಿಗೆ "ಬೆಳ್ಳಿ ಆನೆ"ಯ ಗೌರವ, ಶ್ರೀಮತಿ ಎಸ್.ಕೆ.ಪ್ರಭಾ, ಶ್ರೀ ಎಂ.ಕೆ. ಖಾನ್ ಮತ್ತು ಶ್ರೀಮತಿ ಹೇಮಾ ವಿಜಯಕುಮಾರ್ ಅವರಿಗೆ "ರಜತ ತಾರೆಗೆ ಪಟ್ಟಿ" ಗೌರವ, ಶ್ರೀ ರೇವಣಸಿದ್ದಪ್ಪ, ಶ್ರೀಮತಿ ಪ್ರಭಾ ಲೋಂಡೆ, ಶ್ರೀ ಅಬ್ದುಲ್ ಜಮೀಲ್ ಮತ್ತು ಶ್ರೀ ಎನ್. ಶ್ರೀನಿವಾಸನ್ ಅವರಿಗೆ "ರಜತ ತಾರೆ" ಗೌರವ ಸಂದಿದೆ. ಎಲ್ಲಾ ಪದಕ ವಿಜೇತರನ್ನೂ ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಅವರುಗಳ ಸೇವೆಯು ನಮ್ಮ ಸಂಸ್ಥೆಗೆ ಬಹಳ ಅಮೂಲ್ಯವಾದುದು. ನಮ್ಮ ಸಂಸ್ಥೆಯ ತೊಂಭತ್ತೆಂಟನೆಯ ರಾಜ್ಯ ಪರಿಷತ್ ಸಭೆಯು ದಿನಾಂಕ 25.09.2016 ರಂದು ಬೆಂಗಳೂರಿನಲ್ಲಿ ಸೇರಿ 2015-16 ರ ವಾರ್ಷಿಕ ವರದಿ ಮತ್ತು ಲೆಕ್ಕ ಪತ್ರವನ್ನು ಅಂಗೀಕರಿಸಿದೆ.

ಕಳೆದ ವರ್ಷದಂತೆ ಈ ವರ್ಷವು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗಾಗಿ "ಕರ್ನಾಟಕ ದರ್ಶನ"ವು ಕರ್ನಾಟಕ ಸರ್ಕಾರದಿಂದ ಪ್ರಾಯೋಜಿತವಾಗಿದೆ. ನಮ್ಮ ರಾಜ್ಯದ 33 ಸ್ಕೌಟ್ ಜಿಲ್ಲೆಗಳಿಂದ ಐದು ಸಾವಿರ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯಪ್ರವಾಸ ಮಾಡಲಿದ್ದಾರೆ. ಕರ್ನಾಟಕದ ಸಾಮಾಜಿಕ, ಆರ್ಥಿಕ ಮತ್ತು ಪ್ರಾಕೃತಿಕ ಅಂಶಗಳ ಅನುಭವವು ಮಕ್ಕಳಿಗೆ ದೊರುಕುತ್ತದೆ. ನಮ್ಮ ರಾಜ್ಯದ ಜನಜೀವನವು ಅವರ ಅರಿವಿಗೆ ಬರುತ್ತದೆ. ಇಂತಹ ಅವಕಾಶವು ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಒದಗಿಸಿದ ಕರ್ನಾಟಕದ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯನವರಿಗೂ ಮತ್ತು ಪ್ರವಾಸೋದ್ಯಮ ಇಲಾಖೆಯ ಸಚಿವರಾದ ಸನ್ಮಾನ್ಯ ಶ್ರೀ ಪ್ರಿಯಾಂಕ ಖರ್ಗೆ ಅವರಿಗೂ ನಾನು ಅಭಾರಿಯಾಗಿದ್ದೇನೆ. ಈ ತಿಂಗಳು ಚಿಕ್ಕಮಗಳೂರು, ಹಾಸನ, ಧಾರವಾಡ, ಬೆಳಗಾವಿ ಮತ್ತು ಮೈಸೂರು ಜಿಲ್ಲೆಗಳಿಗೆ ಸ್ಕೌಟ್ಸ್ ಮತ್ತು ಗೈಡ್ಸ್‌ನ ವಿವಿಧ ಕಾರ್ಯಕ್ರಮದಲ್ಲಿ ಭಾಗವಹಿಸುವುದಕ್ಕಾಗಿ ಭೇಟಿಕೊಟ್ಟಿದ್ದೇನೆ. ಧಾರವಾಡದಲ್ಲಿ ನಡೆದ "ಪ್ರೇರಣಾ" ಕಾರ್ಯಕ್ರಮವು ಸ್ತ್ರೀ ಸಬಲೀಕರಣದತ್ತ ಒಂದು ಮಹತ್ವದ ಹೆಜ್ಜೆಯಾಗಿದೆ. ಸಂಘಟಕರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಕಳೆದ ಎರಡು ತಿಂಗಳಿಂದ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮಾಸಿಕ ವಾರ್ತಾ ಪತ್ರಿಕೆಯ ರೂಪು-ರೇಷೆಗಳನ್ನು ಬದಲಾಯಿಸಲು ಪ್ರಯತ್ನ ಮಾಡುತ್ತಿದ್ದೇವೆ. ಬಣ್ಣದ ಪುಟಗಳು, ಕಾರ್ಯಕ್ರಮಗಳ ವರದಿಯೊಂದಿಗೆ ಬಣ್ಣದ ಚಿತ್ರಗಳು ಆಕರ್ಷಣೀಯವಾಗಿ ಕಾಣುತ್ತಿದೆ. ಕಳೆದ ಸಂಚಿಕೆಯಲ್ಲಿ 70ನೇ ಸ್ವಾತಂತ್ರ್ಯೋತ್ಸವದ ಕಾರ್ಯಕ್ರಮದ ಹಲವಾರು ಚಿತ್ರಗಳನ್ನು ನುಣುಪು ಕಾಗದದ ಮೇಲೆ ಮುದ್ರಿಸಿದ್ದೇವೆ. ಸಂಚಿಕೆಯನ್ನು ಇನ್ನೂ ಸುಧಾರಿಸುವ ಅಭಿಪ್ರಾಯ ನನ್ನದು. ಅದಕ್ಕಾಗಿ ನಿಮ್ಮಿಂದ ಸಲಹೆಗಳನ್ನು ನಿರೀಕ್ಷಿಸುತ್ತೇನೆ. ಜೊತೆಗೆ ಬರವಣಿಗೆಯಲ್ಲಿ ಆಸಕ್ತರಾಗಿರುವವರು ತಮ್ಮ ಸ್ವರಚಿತ ಲೇಖನಗಳನ್ನು ಸಂಪಾದಕ ಮಂಡಳಿಗೆ ಕಳುಹಿಸಿಕೊಡಿ.

ಎಂದಿನಂತೆ, ಪೂರ್ವನಿಗದಿತ ಕಾರ್ಯಕ್ರಮಗಳಾದ ಶಿಬಿರಗಳು, ತರಬೇತಿಗಳು, ಯೋಜಿತ ರೀತಿಯಲ್ಲಿ ನಡೆಯುತ್ತಿವೆ. ಎಲ್ಲರ ಸಹಕಾರಕ್ಕೆ ನಾನು ಚಿರಋಣಿ. ಈ ಭಾವನೆ ಸದಾಕಾಲವೂ ಮುಂದುವರೆಯಲಿ ಎಂದು ಹಾರೈಸುತ್ತೇನೆ.

"ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು



# ಹಿರಿಯರೂ, ನಮ್ಮೆಲ್ಲರ ಮಾರ್ಗದರ್ಶಕರಾದ ರಾಷ್ಟ್ರೀಯ 'ಬೆಳ್ಳಿ ಆನೆ' ಪದಕ ಪುರಸ್ಕೃತ ಡಾ. ಗೊ.ರು. ಚನ್ನಬಸಪ್ಪ ಅವರಿಗೆ ಅಭಿನಂದನೆಗಳು

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು**

**ಅಧ್ಯಕ್ಷರು, ಪ್ರಕಟಣೆಗಳ ಸಮಿತಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

**ಸಹಾಯಕ ರಾಜ್ಯ ಆಯುಕ್ತರು (ಸ್ಕೌಟ್ಸ್), ಪ್ರಕಟಣೆಗಳು, ಭಾ. ಸ್ಕೌ&ಗೈ, ಕರ್ನಾಟಕ**

ವಚನಸಾಹಿತ್ಯ, ಜಾನಪದ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅನುಪಮ ಸಾಧನೆಗೈದಿರುವ ಗೊಂಡೇದಹಳ್ಳಿ ರುದ್ರಪ್ಪ ಚನ್ನಬಸಪ್ಪ ಅವರು ಗೊ.ರು.ಚ ಎಂದೇ ಲೋಕಪ್ರಸಿದ್ಧರು. ಶರಣ ಪರಿಭಾಷೆಯಂತೆ ತನು, ಮನ, ಭಾವಶುದ್ಧವಾಗಿ ಒಳಹೊರಗೊಂದಾದ ನಿತ್ಯಶುದ್ಧರು. ಸಾಹಿತ್ಯ ಮತ್ತು ಜಾನಪದ ಕ್ಷೇತ್ರಗಳ ಹಲವು ಸಂಘಟನೆಗಳ ಕರ್ಣಧಾರತ್ವ ವಹಿಸಿ ಯಶಸ್ಸನ್ನು ದೊರಕಿಸಿ ಕೊಟ್ಟಿರುವುದು ಇವರ ಸಂಘಟನಾ ಚತುರತೆಗೆ ನಿದರ್ಶನ. ವಚನ ಸಾಹಿತ್ಯ–ಸಂಸ್ಕೃತಿಗೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡ ಜಂಗಮರಿವರು.

18.05.1930ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ಗೊಂಡೇದಹಳ್ಳಿಯಲ್ಲಿ ಶ್ರೀಮತಿ ಅಕ್ಕಮ್ಮ ಮತ್ತು ಶ್ರೀ ರುದ್ರಪ್ಪ ಗಿರಿಗೌಡರ ಸುಪುತ್ರರಾಗಿ ಜನಿಸಿದ ಚನ್ನಬಸಪ್ಪ ಅವರು ಸ್ವಾತಂತ್ರ್ಯ ಪೂರ್ವ ದಿನಗಳಲ್ಲಿ ಸಹಜವಾಗಿಯೇ ಸ್ವಾತಂತ್ರ್ಯ ಚಳುವಳಿಯ ಸೆಳೆತಕ್ಕೆ ಸಿಲುಕಿ ಹೋರಾಟಗಳಲ್ಲಿ ತೊಡಗಿದವರು. 1948ರಲ್ಲಿ ಶಾಲಾ ಶಿಕ್ಷಕರಾಗಿ ವೃತ್ತಿ ಜೀವನ ಆರಂಭಿಸಿದ ಗೊ.ರು.ಚ ಅವರು ಆರೋಗ್ಯ ಇಲಾಖೆ, ವಾರ್ತಾ ಇಲಾಖೆಗಳಲ್ಲಿ ಸಹ ಸೇವೆ ಸಲ್ಲಿಸಿದ್ದರು. ಭಾರತ ಜನಸಂಖ್ಯಾ ನಿಯಂತ್ರಣ ಯೋಜನೆಯ ಪ್ರಕಟಣಾ ವಿಭಾಗದ ಉಪನಿರ್ದೇಶಕರಾಗಿ 1988ರಲ್ಲಿ ವೃತ್ತಿಯಿಂದ ನಿವೃತ್ತಿ ಹೊಂದಿದರು.

1995ರಿಂದ ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಪರಿಷತ್ತನ್ನು ಎಲ್ಲ ಜಿಲ್ಲಾ ತಾಲೂಕು ಕೇಂದ್ರಗಳಿಗೆ ವಿಸ್ತರಿಸಿದ್ದಲ್ಲದೇ, ಗೋವಾ, ಮಹಾರಾಷ್ಟ್ರ, ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿಯೂ ಶಾಖೆಗಳನ್ನು ನೆಲೆಗೊಳಿಸಿದರು. ದೂರದರ್ಶನಕ್ಕಾಗಿ ಶರಣ ವಾಹಿನಿ ಧಾರವಾಹಿ ನಿರ್ಮಾಣ, 'ಮಹಾಮನೆ' ಮಾಸಿಕ ಪ್ರಕಟಣೆ, ಮಹಿಳೆಯರಿಗಾಗಿಯೇ **'ಕದಳಿ ಮಹಿಳಾ ವೇದಿಕೆ'** ರಚನೆ, 'ಎಳೆಯರ ಲೋಕ', 'ಯುವ ಸಂಗಮ' ಹೀಗೆ ಹಲವು ಸ್ಥರಗಳಲ್ಲಿ ಎಲ್ಲಾ ವಯೋಮಾನದ ಜನವರ್ಗದ ಸಾಮಾಜಿಕ ಸಂಘಟನೆ ಕೈಗೊಳ್ಳುತ್ತಿದ್ದಾರೆ. ರಾಷ್ಟ್ರಮಟ್ಟದ 11 ಶರಣ ಸಾಹಿತ್ಯ ಸಮ್ಮೇಳನಗಳು ಮತ್ತು ರಾಜ್ಯಮಟ್ಟದ 4 ಮಹಿಳಾ ಸಮ್ಮೇಳನಗಳು ಇವರ ಸಂಘಟನಾ ಸಾಮರ್ಥ್ಯಕ್ಕೆ ನಿದರ್ಶನ.

ವೃತ್ತಿಯ ಹೊರತಾಗಿ ಪ್ರವೃತ್ತಿಯಾಗಿ ರೂಢಿಸಿಕೊಂಡ ನೆಲಮೂಲದ ಜಾನಪದ ಪರಂಪರೆಯನ್ನು ರಕ್ಷಿಸಲು ವಿಶೇಷ ಶ್ರಮ ವಹಿಸಿದ್ದಾರೆ. 1967ರಲ್ಲಿ ತರೀಕೆರೆಯಲ್ಲಿ ಜಾನಪದ ಸಮ್ಮೇಳನ ಸಂಘಟಿಸಿ **'ಹೊನ್ನ ಬಿತ್ತೇವು ಹೊಲಕೆಲ್ಲ'** ಕೃತಿಯ ಸಂಪಾದಕರಾಗಿಯೂ ಶ್ರಮಿಸಿದ್ದಾರೆ. ಕೆ.ಆರ್.ಲಿಂಗಪ್ಪ ಅಭಿನಂದನಾ ಸಮಿತಿ ಪರವಾಗಿ ಇವರು ಸಂಪಾದಿಸಿದ **'ಗ್ರಾಮಜ್ಯೋತಿ'** ಕೃತಿಯೂ ಇವರ ವಿಶಿಷ್ಟತೆಗೆ ಸಾಕ್ಷಿಯಾಗಿದೆ. **'ಚೆಗೆವಾರ'** ಕೃತಿ ಅವರ ಅನುವಾದ ಸಾಮರ್ಥ್ಯವನ್ನು ಪ್ರಕಟಿಸಿದ ಕೃತಿ. ಜನಪದ ವಿಷಯಾಧಾರಿತ 'ಸಾಕ್ಷಿಕಲ್ಲು', 'ಬೆಳ್ಳಕ್ಕಿ ಹಿಂಡು ಬೆದರ್ಯಾವೋ', ನಾಟಕಗಳು ಅವರ

ಸೃಜನಶೀಲ ಅಭಿವ್ಯಕ್ತಿಗೆ ಸಾಕ್ಷಿಯಾದವು. ವಾರ್ತಾ ಇಲಾಖೆಯ **'ಜನಪದ'** ಪತ್ರಿಕೆಯ ಸಹಾಯಕ ಸಂಪಾದಕರಾಗಿ, **'ಪರಿಷತ್ ಪತ್ರಿಕೆ', 'ಜನಪದ ಜಗತ್ತು'** ಪತ್ರಿಕೆಗಳ ಸಂಪಾದಕರಾಗಿ ಅವುಗಳನ್ನು ಅಧ್ಯಯನಶೀಲವಾಗಿ ರೂಪಿಸುವಲ್ಲಿ ಇವರ ಪಾತ್ರ ಹಿರಿದು. ಜಾನಪದ ವಿಶ್ವವಿದ್ಯಾಲಯದ ಸ್ಥಾಪನೆಯಲ್ಲಿ ಇವರ ಪಾತ್ರ ಪ್ರಮುಖವಾದುದು.

ಶರಣ ಸಾಹಿತ್ಯ ಇವರನ್ನು ಆಕರ್ಷಿಸಿದ್ದು, ವಚನ ಚಳುವಳಿಯ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದೇ ಅಲ್ಲದೆ, ವಚನ ಚಳುವಳಿಯ ಆಶಯಗಳನ್ನು ಪ್ರಬಲವಾಗಿ ಪ್ರತಿಪಾದಿಸುವ ವಿದ್ವಾಂಸರುಗಳಲ್ಲಿ ಗೊ.ರು.ಚ ಅವರು ಪ್ರಮುಖರು. ವಿಭೂತಿ, ದಾಸೋಹ, ಸೇವಾ ಸಂಪದ, ಮಹಾದೇವಿ, ಸದಾಶಿವ ಶಿವಾಚಾರ್ಯ, ಚೆಲುವಾಂಬಿಕೆ, ಕರ್ನಾಟಕ ಪ್ರಗತಿಪಥ ಮೊದಲಾದ ವಿಶಿಷ್ಟ ಕೃತಿಗಳನ್ನು ಇವರು ರಚಿಸಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಸಿಬ್ಬಂದಿಯನ್ನು ವೇತನಾನುದಾನ ವ್ಯಾಪ್ತಿಗೆ ಒಳಪಡಿಸಿದ ಶ್ರೇಯ ಇವರದು. ಗೀತ-ಸಂಗೀತ, ಕಾವ್ಯ-ಕಾವೇರಿಯಂತರಹ ಜನಪ್ರಿಯ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ರೂಪಿಸಿದ ಚತುರ ಸಂಘಟಕರಿವರು. ಇವರ ಕಾಲದಲ್ಲಿಯೇ ಕನ್ನಡ ಸಾಹಿತ್ಯ ಪರಿಷತ್ತು ತನ್ನ ವಜ್ರ ಮಹೋತ್ಸವವನ್ನಾಚರಿಸಿತು. ಅವರ ಅಧಿಕಾರಾವಧಿಯಲ್ಲಿ ಸಾಹಿತ್ಯ ಪರಿಷತ್ತು ಸುಮಾರು 150ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದೆ. **'ಒಬ್ಬ ಕನ್ನಡಿಗ-ಒಂದು ರೂಪಾಯಿ'** ಯೋಜನೆಯ **ಅಮೃತನಿಧಿ** ಕನ್ನಡ ಸಾಹಿತ್ಯ ಪರಿಷತ್ತನ್ನು ಆರ್ಥಿಕವಾಗಿ ಬಲಪಡಿಸಲು ಸಹಕಾರಿಯಾಯಿತು.

ಕರ್ನಾಟಕ ಸ್ಕೌಟ್ಸ್-ಗೈಡ್ಸ್ ಚಳವಳಿಯಲ್ಲಿ ಕಳೆದ ನಾಲ್ಕು ದಶಕಗಳಿಗೂ ಹೆಚ್ಚು ಕಾಲ ಸಕ್ರಿಯವಾಗಿ ಭಾಗವಹಿಸಿ ಚಳವಳಿಯ ಬೆಳವಣಿಗೆಗೆ ಮಾರ್ಗದರ್ಶನ ಮಾಡತ್ತಿರುವ ಡಾ. ಗೊ.ರು. ಚನ್ನಬಸಪ್ಪನವರು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ರಾಜ್ಯ ಜಾಂಬೋರೇಟ್‌ಗಳು, ವಿಶೇಷ ಸಂದರ್ಭದ ಸ್ಮರಣೆ ಸಂಚಿಕೆಗಳು, ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್-ರೇಂಜರ್ಸ್‌ಗಳಿಗೆ ಉಪಯುಕ್ತವಾದ ಸಾಹಿತ್ಯದ ಪ್ರಕಟಣೆಗಳನ್ನು ಮುದ್ರಿಸುವಲ್ಲಿ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದಾರೆ.

ಡಾ. ಗೊ.ರು. ಚನ್ನಬಸಪ್ಪ ಅವರು ಕಳೆದ ಆರು ದಶಕಗಳಿಗೂ ಹೆಚ್ಚು ಕಾಲ ಸಮಾಜಿಕ, ಸಾರ್ವಜನಿಕ ಹಾಗೂ ಸ್ಕೌಟ್-ಗೈಡ್ ಚಳವಳಿಗೆ ಸಲ್ಲಿಸಿರುವ ವಿಶಿಷ್ಟ ಸೇವೆಯನ್ನು ರಾಷ್ಟ್ರೀಯ ಸಂಸ್ಥೆಯವರು ಗುರುತಿಸಿ ಭಾರತ್ ಸ್ಕೌಟ್ಸ್-ಗೈಡ್ಸ್ ಚಳವಳಿಯ ಅತ್ಯುನ್ನತ ಪ್ರಶಸ್ತಿಯಾದ **"ಬೆಳ್ಳಿ ಆನೆ"** ಪದಕ ಪಟ್ಟಿಯಲ್ಲಿ ನಮ್ಮ ಸಂಸ್ಥೆಯ ಹಿರಿಯರೂ ಹಾಗೂ ಮಾರ್ಗದರ್ಶಕರಾದ ಡಾ. ಗೊ.ರು. ಚನ್ನಬಸಪ್ಪ ಅವರಿಗೆ ನೀಡಲಾಗಿದೆ ಎಂದು ಘೋಷಿಸಿದ್ದಾರೆ. ಭಾರತದ ಗೌರವಾನ್ವಿತ ರಾಷ್ಟ್ರಪತಿಗಳು ನವದೆಹಲಿಯ ರಾಷ್ಟ್ರಪತಿ ಭವನದಲ್ಲಿ **"ಬೆಳ್ಳಿ ಆನೆ"** ಪ್ರಶಸ್ತಿಯನ್ನು ಶ್ರೀಯುತರಿಗೆ ನೀಡಿ ಗೌರವಿಸಲಿದ್ದಾರೆ.

ಇವರ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ ಗೌರವ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಭಾಲ್ಕಿ ಚನ್ನಬಸವ ಪಟ್ಟದ್ದೇವರ ಪ್ರಶಸ್ತಿ, ಶ್ರೀ ಸಿದ್ದಗಂಗೆ ಶಿವಕುಮಾರ ಪ್ರಶಸ್ತಿ, ಧಾರವಾಡ ಮುರುಘಾಮಠ ಪ್ರಶಸ್ತಿಯೂ ಸೇರಿದಂತೆ ಹಲವು ಪ್ರಶಸ್ತಿ ಗೌರವಗಳು ಇವರ ಸಿರಿಮುಡಿಗೇರಿವೆ. ಗೊರುಚ ಅವರು ತಮ್ಮ 60ನೆಯ ಜನ್ಮದಿನಕ್ಕೆ ಅಭಿಮಾನಿಗಳು ಅರ್ಪಿಸಿದ ನಿಧಿಯನ್ನು ಗೊಂಡೇದಹಳ್ಳಿ ಗ್ರಾಮ ವಿಕಾಸಕ್ಕೆ ಅರ್ಪಿಸಿದರು. ಡಾ॥ ಸಿ.ವೀರಣ್ಣ ಸಂಪಾಕತ್ವದ **'ತವನಿಧಿ'**, ಮತ್ತು ಸಂದರ್ಭ ಸಂಚಿಕೆ **'ಹಳ್ಳಿಯ ಬೆಳ್ಳಿ'** ಅವರ ಸಾಧನೆಗೆ ಸಂದ ಸಾಹಿತ್ಯಕ ಸಮ್ಮಾನಗಳು. ಜನಪದ ವಿಶ್ವವಿದ್ಯಾಲಯವು ಇವರ ಸಾಧನೆಯನ್ನು ಗುರುತಿಸಿ ಗೌರವ ಡಾಕ್ಟರೇಟ್ ನೀಡಿ ಗೌರವಿಸಿದೆ.

**ಶ್ರೀ ಗೊರು.ಚನ್ನಬಸಪ್ಪ** ಅವರ ಸಾಧನೆಯನ್ನು ಗುರುತಿಸಿ ಕರ್ನಾಟಕ ಸರ್ಕಾರವು ಕನ್ನಡ ನಾಡಿನ ಜನತೆಯ ಪರವಾಗಿ **2015**ನೆಯ ಸಾಲಿನ **ಬಸವ ರಾಷ್ಟ್ರೀಯ ಪುರಸ್ಕಾರ**ವನ್ನು ಅವರಿಗೆ ಗೌರವಾನ್ವಿತ ಮುಖ್ಯಮಂತ್ರಿಗಳು ಪ್ರದಾನ ಮಾಡಿರುತ್ತಾರೆ. ಸಮಸಮಾಜದ ಪರಿಕಲ್ಪನೆಯ ಇವರ ಶ್ರಮದಾನ ನಿರಂತರವಾಗಿ ಮುನ್ನಡೆಯುಲಿ ಮತ್ತು ಯಶಕಾಣಲಿ ಎಂದು ಹಾರೈಸುತ್ತೇವೆ.

# ಪ್ರಪಂಚದ 'ಶಾಂತಿದೂತೆ'
# ಮದರ್ ತೆರೇಸಾ



ಮನುಕುಲದ ಸೇವೆಗಾಗಿ ಇಡೀ ಬದುಕನ್ನೇ ಸವೆಸಿದ ಜಗಜ್ಜನನಿ ವಿಶ್ವಪ್ರೇಮ, ಶಾಂತಿ, ಕರುಣೆ, ಮಮತೆಯ ಮೂರ್ತಸ್ವರೂಪ ಮದರ್ ತೆರೇಸಾ ಅವರಿಗೆ ಸೆಪ್ಟಂಬರ್ 04-09-2016 ರ ಸಂತ ಪದವಿ ಪ್ರಾಪ್ತಿಗಾಗಿ ಈ ಚಿಕ್ಕ ಲೇಖನ.

ಮದರ್ ತೆರೇಸಾ ಪ್ರಪಂಚದಲ್ಲಿ ಬಹಳ ಹೆಸರು ಕೀರ್ತಿಗಳಿಸಿಕೊಂಡ ಮಹಿಳೆ. ಮದರ್ ಎಂದರೆ ತಾಯಿ. ಅವರು ಯುಗೋಸ್ಲೋವಿಯಾದ ಸ್ಕೂಪೆ ಎಂಬ ಊರಿನಲ್ಲಿ 27ನೇ ಆಗಸ್ಟ್ 1910 ರಲ್ಲಿ ನಿಕೋಲಿ ಮತ್ತು ದ್ರೋಂಡ ಎಂಬ ದಂಪತಿಗಳ 13ನೇ ಮಗಳಾಗಿ ಜನಿಸಿದರು. ತೆರೇಸಾಗೆ ತಂದೆ-ತಾಯಿಗಳು ಇಟ್ಟ ಹೆಸರು ಆ್ಯಗ್ನಿಸ್. ಪೂರ್ತಿ ಹೆಸರು ಆ್ಯಗ್ನಿಸ್ ಗೋಂಕ್ಸಾಜೊಕ್ಯೂ (ಗೋಂಕಾಚಿಜಾಕ್ಸಿಮ್) ಗೋಂಕ್ಸಾ ಎಂದರೆ ಅರಳವು ಮೊಗ್ಗು ಎಂಬ ಅರ್ಥ ಬರುವುದು.

ಆ್ಯಗ್ನಿಸ್ ಬಾಲ್ಯದಲ್ಲಿ ಪ್ರಾಣ ಪಕ್ಷಿಗಳು ಮತ್ತು ಮಕ್ಕಳನ್ನು ಕಂಡರೆ ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ಅವರಿಗೆ ಅನಾಥರನ್ನು ಕಂಡರೆ ತುಂಬಾ ಪ್ರೀತಿ. ಆ್ಯಗ್ನಿಸ್ ಚಿಕ್ಕಂದಿನಿಂದಲೇ ತಾನು ಮುಂದೆ ಒಬ್ಬ ಕೀರ್ತಿ ತರುವ ಮಹಿಳೆಯಾಗುವ ಸೂಚನೆಯನ್ನು ನೀಡಿದ್ದಳು. ಸನ್ಯಾಸಿಯಾಗಲು ಬಯಸಿದ ಆ್ಯಗ್ನಿಸ್ ಡಬ್ಲಿನ್‌ನಲ್ಲಿರುವ ಸಿಸ್ಟರ್ ಆಫ್ ಲೊರೆಟಾದ ಸನ್ಯಾಸಿಯರ ಶಿಕ್ಷಣ ಕೇಂದ್ರಕ್ಕೆ ಸೇರಿದಳು. ಆ್ಯಗ್ನಿಸ್ ಚಿಕ್ಕ ವಯಸ್ಸಿಗೆ ತನ್ನ ತಂದೆಯನ್ನು ಕಳೆದುಕೊಂಡಳು, ಅವಳಿಗೆ ತಾಯಿಯನ್ನು ಕಂಡರೆ ಬಹಳ ಗೌರವ-ಎಲ್ಲಾ ಮಕ್ಕಳನ್ನು ಅವಳ ತಾಯಿ ತಾನೇ ದುಡಿದು ಸಾಕಬೇಕಾಗಿತ್ತು. ಬಾಲ್ಯದಿಂದಲೇ ಬಡತನದ ನೋವು ಅರಿವಾಯಿತು. ತಾಯಿಯೇ ಆ್ಯಗ್ನಿಸ್‌ಳ ಮಾರ್ಗದರ್ಶಕಿಯಾಗಿದ್ದಳು. ಭಗವಂತನ ಸೇವೆಯಂತೆ ದೀನ ದುರ್ಬಲರ ಸೇವೆಯನ್ನು ಮಾಡಬೇಕು ಪ್ರತಿಯೊಬ್ಬರನ್ನು ಪ್ರೀತಿ ಮತ್ತು ಗೌರವದಿಂದ ಕಾಣಬೇಕು ಎಂದು ತಾಯಿ ಬೋಧಿಸಿದಳು. ತೆರೇಸಾ ಅವರ ಗುಣವನ್ನು ಬಾಲ್ಯದಿಂದಲೇ ಕಂಡುಕೊಂಡ ಶಿಕ್ಷಕಿ "ಈ ಹುಡುಗಿ ಮುಂದೆ ಒಂದ ದಿನ ದೈವಾಂಶಸಂಭೂತೆ ಎಂದು ಪ್ರಪಂಚದಲ್ಲಿ ಖ್ಯಾತಿ ಗಳಿಸುವಳು" ಎಂದು ಭವಿಷ್ಯ ನುಡಿದಿದ್ದಳು.

ಅಲ್ಲಿಂದ ಆ್ಯಗ್ನಿಸ್ ಶಿಕ್ಷಕಿಯಾಗಿ ಕಲಕತ್ತೆಯ ಶಾಲೆಯೊಂದರಲ್ಲಿ ಕೆಲಸ ಮಾಡಲು ಪ್ರಾರಂಭಿಸಿದಳು. ಅಲ್ಲಿ ಸುಮಾರು 17 ವರ್ಷಗಳ ಕಾಲ ಶಿಕ್ಷಕಿ ಮತ್ತು ಪ್ರಾಂಶುಪಾಲೆಯಾಗಿ ಕೆಲಸ ನಿರ್ವಹಿಸಿದಳು. ತಾನು ಶಿಕ್ಷಕಿಯಾಗಿದ್ದಾಗ ಭೂಗೋಳ, ಚರಿತ್ರೆ ಮತ್ತು ಹಲವಾರು ಧಾರ್ಮಿಕ ವಿಷಯಗಳ ಬಗ್ಗೆ ಭೋದಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. 1929ರ ಜನವರಿಗೆ ಕಲಕತ್ತಾಗೆ ಪ್ರಯಾಣ ಬೆಳೆಸಿದರು. ತನ್ನ ಮುಂದಿನ ಸಂಪೂರ್ಣ ಜೀವನವನ್ನು ಹೂಗ್ಲಿ ನದಿ ತೀರದಲ್ಲಿ ಕಳೆಯುವ ನಿರ್ಧಾರ ಹೊಂದಿದರು. ಮುಂದೆ ತನ್ನ ಲೋಕಿಟೋ ಕಾನ್ವೆಂಟಿನ ಪಯಣದ ದಾರಿಯಲ್ಲಿ ಆ್ಯಗ್ನಿಸ್‌ರು ಭಾರತದ ಕೆಲವು ದುರಾದೃಷ್ಟ ದೃಶ್ಯಗಳನ್ನು ಕಂಡಳು. ರೊಜಾರಿಯಾ ಟೀಚರ್ ಎಂಬ ಮಾತೆಯ ಮಾತಿನಂತೆ ತರಬೇತಿಗೆ 26ನೇ ಸೆಪ್ಟಂಬರ್ 1946 ರಲ್ಲಿ ಡಾರ್ಜಿಲಿಂಗ್‌ಗೆ ತೆರಳಿದರು, ತರಬೇತಿ ಮುಗಿಸಿ ಪುನಃ ಕಲಕತ್ತೆಗೆ ರೈಲಿನಲ್ಲಿ ಪ್ರಯಾಣಿಸುವ ಸಂದರ್ಭದಲ್ಲಿ ಧ್ಯಾನದಲ್ಲಿ ನಿರತರಾಗಿದ್ದಾಗ ಯಾರೋ ಕಿವಿಯಲ್ಲಿ "ನೀನು ಬಡವರ ಸೇವೆ ಮಾಡು" ಎಂದು ಹೇಳಿದಂತೆ ಭಾಸವಾಯಿತು. ಅಂದಿನಿಂದ ಆ ಮಾತುಗಳು ತೆರೇಸಾ ಮನದಲ್ಲಿ ಅಚ್ಚಳಿಯದೇ ಕುಳಿತುಕೊಂಡಿತು. ಕಲಕತ್ತೆಗೆ ಮರಳಿದಾಗ ಈ ಯುವ ಸನ್ಯಾಸಿನಿ ಸಿಸ್ಟರ್ ತೆರೇಸಾ ಆದರು.

ತಾಯಿ ತೆರೇಸಾ ಅವರು ನಡೆಸಿದ ಜೀವನ ಅತ್ಯಂತ ಸರಳವಾದದ್ದು, ಅವರು ಬಿಳಿ ಬಣ್ಣದ ಸೀರೆಗೆ ನೀಲಿ ಅಂಚು ಇರುತ್ತಿತ್ತು. ದಪ್ಪವಾದ ಒರಟಾದ ಸೀರೆಗಳನ್ನು ಧರಿಸುತ್ತಿದ್ದರು. ಕೈಯಲ್ಲಿ ಒಂದು ಬೈಬಲ್, ಕೊರಳಲ್ಲಿ ಶಿಲುಬೆ, ನಿಷ್ಕಲ್ಮಶವಾದ ಮುಖ, ನಿರಾಡಂಬರ ವ್ಯಕ್ತಿತ್ವದ ಮದರ್ ತೆರೇಸಾ ಅವರನ್ನು ಕಂಡರೆ ಜಗತ್ತಿನ ಪ್ರತಿಯೊಬ್ಬ ವ್ಯಕ್ತಿಯು ಗೌರವದಿಂದ ಕಾಣುತ್ತಿದ್ದರು. ಭಾರತಕ್ಕೆ ಬಂದ ಮೇಲೆ ತೆರೇಸಾ ಬಂಗಾಳಿ ಮತ್ತು ಇಂಗ್ಲೀಷ್ ಭಾಷೆಯನ್ನು ಸುಲಲಿತವಾಗಿ ಕಲಿತರು.

ನಂತರ ತೆರೇಸಾ ಅವರು "ಮಿಷನರೀಸ್ ಆಫ್ ಚಾರಿಟಿ" ಎಂಬ ಸೇವಾ ಸಂಸ್ಥೆಯನ್ನು ತೆರೆದರು. ಹೀಗೆ ಥೆರೇಸಾ ಅವರು ಭಾರತದಲ್ಲಿ ತಮ್ಮ ಸೇವಾ ಕಾರ್ಯಕ್ರಮವನ್ನು ಮುಂದುವರೆಸಿದರು. 1942ರ ಬರಗಾಲದ ಭೀಕರ ಬರ ಕಂಡು ಮೋರಿಗಳ ಬಳಿ ಅನಾಥವಾಗಿ ಉಪವಾಸದಿಂದ ನರಳುತ್ತ ಸಾಯುವ ವ್ಯಕ್ತಿಗಳನ್ನು ಕಂಡು ಮಮ್ಮಲ ಮರುಗಿದರು.

1947ರ ಭಾರತ ಪಾಕಿಸ್ತಾನದ ರಕ್ತಪಾತ ದೃಶ್ಯಗಳಿಂದ ತುಂಬ ನೊಂದ ಮದರ್ ತೆರೇಸಾ ಧರ್ಮದ ಹೆಸರಿನಲ್ಲಿಯ ಕಚ್ಚಾಟ ಸಾವು ನೋವುಗಳನ್ನು ಕಂಡು ಮರಗಿದರು. 1953 ಏಪ್ರಿಲ್‌ನಲ್ಲಿ ಸಿಸ್ಟರ್ ಥರೇಸಾ ಅವರು ಹೊಸ ರೋಮನ್ ಕ್ಯಾಥೊಲಿಕ್ ಆರ್ಡರ್ ಸ್ಥಾಪಿಸಿದರು, ಇದೊಂದು ದಯಾ ಸಂಸ್ಥೆಯಾಗಿತ್ತು. ಆಗ ಅವರು ಮದರ್ ತೆರೇಸಾ ಆಗಿ ಗುರುತಿಸಿಕೊಂಡರು ಪಂಜಾಬ್, ಗೋವಾ, ಮುಂಬೈ, ಡಾರ್ಜಿಲಿಂಗ್, ದಿಲ್ಲಿ ಹೀಗೆ ಹಲವಾರು ಕೇಂದ್ರಗಳನ್ನು ಸ್ಥಾಪಿಸಿದರು. ಅವರು ಅಬಲೆಯರಿಗೆ ಶಿಶುಗಳಿಗೆ ರೋಗ ರುಜಿನಗಳಿಗೆ ತುತ್ತಾದವರಿಗೆ ಪ್ರತ್ಯೇಕವಾದ ಸೇವಾ ಕೇಂದ್ರಗಳನ್ನು ತೆರೆದರು. ನಿರ್ಗತಿಕರಿಗೆ ಆಶ್ರಯದಾಣವನ್ನು ತೆರೆದು "ನಿರ್ಮಲ ಹೃದಯ" ಎಂಬ ಹೆಸರನ್ನು ಇಟ್ಟರು, ಅನೇಕ ಶಾಲೆಗಳನ್ನು ತೆರೆದರು ಕೇವಲ ವಿದ್ಯೆಕಲಿತರೆ ಸಾಲದು ಉದ್ಯೋಗ ಬೇಕಲ್ಲವೇ? ಹೀಗಾಗಿ ಮದರ್ "ಪ್ರೇಮವಾನ್" ಎಂಬ ಹೆಸರಿನ ಉದ್ಯೋಗ ಕೇಂದ್ರವನ್ನು ಸ್ಥಾಪನೆ ಮಾಡಿದರು.

ಮದರ್ ಕೈಗೊಂಡ ಸೇವಾ ಕೈಂಕರ್ಯಕ್ಕೆ ದೇಶ-ವಿದೇಶಗಳಿಂದ ಹಣ ಹರಿದು ಬಂದಿತು, ಆಕೆಯ ಕಾರ್ಯಗಳಲ್ಲಿ ಪಾಲ್ಗೊಳ್ಳಲು ಸಂಘ, ಸಂಸ್ಥೆಗಳು ಆಸಕ್ತಿ ತಳೆದವು, ಜನರು ಉದಾರವಾಗಿ ದೇಣಿಗೆ ನೀಡಿದರು. ಹಲವಾರು ಸೇವಾ ಸಂಸ್ಥೆಗಳನ್ನು ತೆರೆದು ಬಡ ಬಗ್ಗರಿಗೆ ನೆರವಾದರು.

**ಪ್ರಶಸ್ತಿ ಪುರಸ್ಕಾರಗಳು** : 1962ರಲ್ಲಿ ಭಾರತ ಸರ್ಕಾರ "ಪದ್ಮಶ್ರೀ" ಪ್ರಶಸ್ತಿ ನೀಡಿ ಗೌರವಿಸಿತು. 1970ರಲ್ಲಿ ಫಿಲಿಫೈನ್ಸ್ ಸರ್ಕಾರ ರೋಮನ್ "ಆ್ಯಗ್ನಿಸ್" ಪ್ರಶಸ್ತಿಯನ್ನು ನೀಡಿ ಗೌರವಿಸಿತು. 1971 ರಲ್ಲಿ "ಜೋಸೆಫ್ ಕೆನಡಿ ಜ್ಯೂನಿಯರ್" ಪ್ರಶಸ್ತಿ ನೀಡಿ ಸತ್ಕರಿಸಿದರು. 1979ರಲ್ಲಿ ಮದರ್ ಥೆರೇಸಾ ಅವರಿಗೆ ವಿಶ್ವದ ಅತ್ಯಧಿಕ ಪ್ರತಿಷ್ಠಿತ ಪ್ರಶಸ್ತಿ ಎಂಬ ಹೆಗ್ಗಳಿಕೆಗೆ ಪಾತ್ರವಾದ "ನೋಬಲ್ ಶಾಂತಿ ಪಾರಿತೋಷಕ" ಪ್ರಶಸ್ತಿ ದೊರಕಿತು. ಪತ್ರಿಕೆಗಳು ಮಾಧ್ಯಮಗಳು ಮದರ್ ಅವನ್ನು "ಮಾನವಸೇವಕಿ" ಎಂದು ಹೊಗಳಿ ಬರೆದವು. ಕಲಕತ್ತಾದ ಜನವರು ಕಾಳಿಕಾದೇವಿಯೇ ಮದರ್ ರೂಪದಲ್ಲಿ ಬಂದಿದ್ದಾಳೆ ಎಂದು ಹೇಳುತ್ತಿದ್ದರು. ಹೀಗೆ ಹಲವಾರು ಪ್ರಶಸ್ತಿ-ಪುರಸ್ಕಾರಗಳು ಬಂದಿದ್ದರೂ ತಾಯಿ ಥೆರೇಸಾ ನಿರಾಡಂಬರ ವ್ಯಕ್ತಿತ್ವ ಮತ್ತು ನಿರೀಕ್ಷೆ ಇಲ್ಲದ ಬದುಕು ನಡೆಸಿದರು. ಪ್ರಶಸ್ತಿ ಬಂದಾಗ ಹಿಗ್ಗಲಿಲ್ಲ ಪದವಿಗಳಿಗೆ ಆಸೆಪಡಲಿಲ್ಲ ಆದರೆ ಪ್ರಶಸ್ತಿಗಳು, ಗೌರವ, ಸನ್ಮಾನಗಳು ತಾಯಿಯನ್ನು ಹುಡುಕಿ ಬಂದವು. 80 ವರ್ಷ ವಯಸ್ಸಿನ ವೃದ್ಧೆ ಮಹಿಳೆಯಾದರೂ ತುಂಬಾ ಉಲ್ಲಾಸ ಚುರುಕುತನದಿಂದ ಓಡಾಡಿ ಕೆಲಸ ಮಾಡುತ್ತಿದ್ದರು. ಅವರು ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳುತ್ತಿದ್ದರು. ಮದರ್ ಥೆರೇಸಾ ಅವರನ್ನು ಇಡೀ ಪ್ರಪಂಚದ "ಶಾಂತಿದೂತೆ" ಎಂದು ಕರೆದು ಪ್ರಶಂಶಿಸಿ ಗೌರವಿಸಿತು.

ಹಿಗೆ ಮದರ್ ಬೇರೆ ದೇಶದಿಂದ ಬಂದು ನಮ್ಮ ಭಾರತ ದೇಶದ ಬಡತನ, ಮೂಢನಂಬಿಕೆ ವಿರುದ್ಧ ಜನರಲ್ಲಿ ಜಾಗೃತಿ ಉಂಟು ಮಾಡಿದರು. ಹೆಣ್ಣು ಮಕ್ಕಳು ಬೇಡ ಎಂದು ಹೇಳುವ ಜನರು ತಮಗೊಬ್ಬಳು ಮದರ್ ನಂತಹ ಮಗಳು ಬೇಕು ಎಂದು ಹಂಬಲಿಸುವ ವ್ಯಕ್ತಿತ್ವ ಮದರ್ ಥೆರೇಸಾ ಅವರದು ಎಂದು ನಿಸ್ಸಂಶಯವಾಗಿ ಹೇಳಬಹುದು. ಮದರ್ ಇಂದು ನಮ್ಮ ಕಣ್ಣೆದುರಿಗೆ ಇಲ್ಲದೆ ಇರಬಹುದು. ಆದರೆ ಅವರು ಹಾಕಿಟ್ಟು ಹೋದ ದಾರಿ ಕಣ್ಣೆದುರಿಗೆ ಇದೆ.



ಮದರ್ ತನ್ನ ಕೊನೆಗಾಲದಲ್ಲಿ ಹಲವಾರು ಬಾರಿ ಆಸ್ಪತ್ರೆಯಲ್ಲಿ ತಂಗಬೇಕಾಯಿತು. ಕೊನೆಗೆ 5ನೆ ಸೆಪ್ಟಂಬರ್ 1997ರಲ್ಲಿ ಮದರ್ ಹೃದಯಾಘಾತದಿಂದ ತಮ್ಮ ಕೊನೆ ಉಸಿರನ್ನು ಎಳೆದರು. ಜಗತ್ತಿನ ಸೇವೆಗೆ ಆಗಮಿಸಿದ ದಿವ್ಯ ಚೇತನ ಪಂಚಭೂತಗಳಲ್ಲಿ ಲೀನವಾಯಿತು. ಆದರೆ ಮದರ್ ಬಿಟ್ಟುಹೋದ ಸಂದೇಶ ನಮ್ಮನ್ನು ಬಿಟ್ಟು ಎಂದಿಗೂ ದೂರಹೋಗಲಾರದು. "ಮದರ್" ಎಂಬ ಪದವೇ ಅತ್ಯಂತ ವಾತ್ಸಲ್ಯವಾದುದು. ಜನ ತೆರೇಸಾ ಅವರನ್ನು ಬಾಯಿತುಂಬಾ ಮದರ್ ಎಂದು ಕರೆದರು. ಅಮ್ಮನ ಪ್ರೀತಿಗೆ ಅನ್ವರ್ಥವಾಗಿ ಬಡವರ ಬದುಕಿನ ಬಲವಾದ ಆಸರೆಯಾಗಿ ಬದುಕಿನ ಮಹಾಮಾತೆ ಮದರ್ ತೆರೇಸಾ ಈಗ ಮಹಾಸಂತರು.

**ಕುಮಾರಿ ಚೈತ್ರ ಅ. ವಿಶ್ವಬ್ರಾಹ್ಮಣ**

"ಕಿರಣಬೇಡಿ"ದಳದ ಗೈಡ್ಸ್ ರಾಜ್ಯಪುರಸ್ಕಾರ ವಿಜೇತೆ.

ಸರ್ಕಾರಿ ಪ.ಪೂ.ಕಾಲೇಜು, ಗಜೇಂದ್ರಗಡ ತಾ॥ ರೋಣ ಜಿ॥ ಗದಗ

## ರಾಜ್ಯಮಟ್ಟದ ವಿಪತ್ತು ನಿರ್ವಹಣಾ ಮತ್ತು ಸ್ವಚ್ಛ ಭಾರತ್ ಸೇವಾ ಶಿಬಿರ

ದಿನಾಂಕ 26-08-2016 ರಿಂದ 30-08-2016 ರ ವರಗೆ ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆ, ಚಿಕ್ಕಬಳ್ಳಾಪುರ ಜಿಲ್ಲೆ ಹಾಗೂ ಬಾಗೇಪಲ್ಲಿ ಸ್ಥಳೀಯ ಸಂಸ್ಥೆಗಳ ಸಹಭಾಗಿತ್ವದಲ್ಲಿ ನ್ಯಾಷನಲ್ ಕಾಲೇಜ್, ಬಾಗೇಪಲ್ಲಿ ಆವರಣದಲ್ಲಿ ರಾಜ್ಯಮಟ್ಟದ ವಿಪತ್ತು ನಿರ್ವಹಣಾ ಮತ್ತು ಸ್ವಚ್ಛ ಭಾರತ್ ಸೇವಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ವಿವಿಧ ಜಿಲ್ಲೆಗಳಿಂದ 102 ಶಿಬಿರಾರ್ಥಿಗಳು ಭಾಗವಹಿಸಿದ್ದರು. ದಿನಾಂಕ 26-08-2016 ರಂದು ಧ್ವಜ ಸಮಾರಂಭದ ನಂತರ ವಿಪತ್ತು ನಿರ್ವಹಣಾ ತಜ್ಞರಾದ ಶ್ರೀ ಬಿ.ವಿ. ರಘು ರವರು ಶಿಬಿರಾರ್ಥಿಗಳಿಗೆ ವಿಪತ್ತು ನಿರ್ವಹಣೆಯ ಬಗ್ಗೆ ದೃಶ್ಯ-ಶ್ರಾವ್ಯ ಮಾಧ್ಯಮ ಬಳಸಿ ಸಂಪೂರ್ಣ ಮಾಹಿತಿಯನ್ನು ನೀಡಿದರು. ಬಿ.ಇ.ಓ. ಶ್ರೀಮತಿ ಆದಿಲಕ್ಷಮ್ಮ, ಸ್ಥಳೀಯ ಸಂಸ್ಥೆಯ ಅಧ್ಯಕ್ಷರು, ಶಿಬಿರಕ್ಕೆ ಭೇಟಿ ನೀಡಿ, ಎಲ್ಲ ವ್ಯವಸ್ಥೆಗಳನ್ನು ಪರಾಮರ್ಶಿಸಿದರು.



ದಿನಾಂಕ 27-08-2016 ರಂದು ಬೆಳಿಗ್ಗೆ 9.30ಕ್ಕೆ ಬಾಗೇಪಲ್ಲಿಯ ಮುಖ್ಯ ರಸ್ತೆಗಳಲ್ಲಿ ಹಮ್ಮಿಕೊಂಡ "ಪಥಸಂಚಲನಾ" ಕಾರ್ಯಕ್ರಮವನ್ನು ಶ್ರೀ ಪಾಚೇಪಲ್ಲಿ ನಾಗರಾಜರೆಡ್ಡಿಯವರು ಉದ್ಘಾಟಿಸಿದರು. ಸ್ಥಳೀಯ 3 ಶಾಲೆಗಳ ಬ್ಯಾಂಡ್‌ಸೆಟ್‌ಗಳೊಂದಿಗೆ ಹಿರಿಯ ಸ್ಕೌಟರ್ ಆದ ಶ್ರೀ ರಂಗಯ್ಯನಾಯ್ಡು ರವರ ನೇತೃತ್ವದಲ್ಲಿ ಪಥಸಂಚಲನವು ನಡೆಯಿತು. ನಂತರ ಶ್ರೀ ಬಿ.ವಿ. ರಘು ರವರು ವಿಪತ್ತು ನಿರ್ವಹಣಾ ಕಾರ್ಯದಲ್ಲಿ ನಡೆಸಬೇಕಾದ 12 ಕಾರ್ಯ ಚಟುವಟಿಕೆಗಳ ಬಗ್ಗೆ ವಿವರಿಸಿ ಆಯಾ ಗುಂಪುಗಳಿಗೆ ಕಾರ್ಯ ಜವಾಬ್ದಾರಿಯನ್ನು ನೀಡಿದರು. ಶಿಬಿರಾರ್ಥಿಗಳು ತಮಗೆ ನೀಡಲಾದ ಸನ್ನಿವೇಶವನ್ನು ಕಲ್ಪಿಸಿಕೊಂಡು ಗುಂಪುಗಳಲ್ಲಿ ದೀರ್ಘವಾಗಿ ಚರ್ಚಿಸಿ ಅತ್ಯುತ್ತಮವಾದ ಯೋಜನೆಗಳನ್ನು ರೂಪಿಸಿ ಮಂಡಿಸಿದರು.

ದಿನಾಂಕ 28-08-2016 ರಂದು ಗೃಹ ರಕ್ಷಕದಳ, ಅಗ್ನಿಶಾಮಕದಳ, ಆರೋಗ್ಯ ಇಲಾಖೆಯ ಸ್ಥಳೀಯ ಮುಖ್ಯಸ್ಥರು ವಿಪತ್ತು ನಿರ್ವಹಣಾ ಕಾರ್ಯದಲ್ಲಿ ವಹಿಸಬೇಕಾದ ಮುಂಜಾಗ್ರತೆ ಹಾಗೂ ಜವಾಬ್ದಾರಿಗಳನ್ನು ವಿವರಿಸಿ ಮಧ್ಯಾಹ್ನ ಶಿಬಿರಾರ್ಥಿಗಳನ್ನು ತೊಡಗಿಸಿಕೊಂಡು ವಿಪತ್ತು ನಿರ್ವಹಣೆಯ 12 ವಿಭಾಗಗಳ "ಅಣಕು ಪ್ರದರ್ಶನ" ನೀಡಿದರು. ಶಿಕ್ಷಣ ಇಲಾಖೆಯ ಉಪನಿರ್ದೇಶಕರು ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯ ಮುಖ್ಯ ಆಯುಕ್ತರಾದ ಶ್ರೀ ಅಶ್ವತ್ಥ ರೆಡ್ಡಿ, ಶಾಶ್ವತ ನೀರಾವರಿ ಜಿಲ್ಲಾ ಅಧ್ಯಕ್ಷರಾದ ಶ್ರೀ ಆಂಜನೇಯ ರೆಡ್ಡಿ, ಜಿಲ್ಲಾ ಅಗ್ನಿಶಾಮಕ ದಳದ ಅಧಿಕಾರಿಗಳಾದ ಶ್ರೀ ಅಶೋಕ್ ಬಾಬು, ತಾಲ್ಲೂಕ್ ಆರೋಗ್ಯ ಅಧಿಕಾರಿಗಳಾದ ಶ್ರೀ ಸತ್ಯನಾರಾಯಣ ರೆಡ್ಡಿ, ಯುವಶಕ್ತಿ ಸಂಘದ ಅಧ್ಯಕ್ಷರಾದ ಶ್ರೀ ಜಯಪ್ರಕಾಶ್ ರೆಡ್ಡಿ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಶ್ರೀನಿವಾಸ್ ಹಾಗೂ ಶ್ರೀ ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು ಉಪಸ್ಥಿತರಿದ್ದರು.

ದಿನಾಂಕ 29-08-2016 ರಂದು ಗಡಿದಂ ಬೆಟ್ಟದ ಚಾರಣದೊಂದಿಗೆ ಶಿಬಿರಾರ್ಥಿಗಳು ಶ್ರೀ ಲಕ್ಷ್ಮೀವೆಂಕಟೇಶ್ವರ ದೇವಸ್ಥಾನವನ್ನು ತಲುಪಿ ದೇವಸ್ಥಾನ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ನಿರ್ವಹಿಸಿದರು. ಮಧ್ಯಾಹ್ನ ಮತ್ತೊಬ್ಬ ಆರೋಗ್ಯಾಧಿಕಾರಿ ಶ್ರೀ ನಾಗರಾಜ್ ರವರು "ರಕ್ತದಾನ" ಮಹತ್ವವನ್ನು ವಿವರಿಸಿ ಅದರ ಬಗ್ಗೆ ಸಾಮಾನ್ಯವಾಗಿರುವ ತಪ್ಪು ಕಲ್ಪನೆಗಳನ್ನು ನಿವಾರಿಸಿದರು. ರಾತ್ರಿ ನಡೆದ ಭವ್ಯ ಶಿಬಿರಾಗ್ನಿಯನ್ನು ನ್ಯಾಷನಲ್ ಕಾಲೇಜ್ ಬಾಗೇಪಲ್ಲಿಯ ಪ್ರಾಂಶುಪಾಲರಾದ ಶ್ರೀ ಶಿವಣ್ಣನವರು ಉದ್ಘಾಟಿಸಿದರು.

ದಿನಾಂಕ 30-08-2016 ರಂದು ಪ್ರಾತಃಕಾಲ 7 ಗಂಟೆಗೆ ನಡೆದ ಸರ್ವಧರ್ಮ ಪ್ರಾರ್ಥನೆಯ ನಂತರ ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ಎ.ಎಂ. ಶಂಕರ್ ರವರು ಶಿಬಿರಾರ್ಥಿಗಳಿಗೆ ರಾಜ್ಯ ಹಾಗು ರಾಷ್ಟ್ರಪತಿ ರೋವರ್-ರೇಂಜರ್ ಪುರಸ್ಕಾರಗಳಿಗೆ ನಡೆಸಬೇಕಾದ ತಯಾರಿಯನ್ನು ವಿವರಿಸಿದರು. ಶಿಬಿರಾರ್ಥಿಗಳು ನ್ಯಾಷನಲ್ ಕಾಲೇಜ್ ಬಾಗೇಪಲ್ಲಿ ಯುವ ರೆಡ್ ಕ್ರಾಸ್ ಸಂಸ್ಥೆಯೊಂದಿಗೆ ರಕ್ತದಾನ ಶಿಬಿರದಲ್ಲಿ ಪಾಲ್ಗೊಂಡರು.

12.00 ಗಂಟೆಗೆ ಹಮ್ಮಿಕೊಂಡಿದ್ದ ಮುಕ್ತಾಯ ಸಮಾರಂಭವು ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರ ಅಧ್ಯಕ್ಷತೆಯಲ್ಲಿ ನಡೆಯಿತು. ನ್ಯಾಷನಲ್ ಎಜುಕೇಷನ್ ಸೊಸೈಟಿಯ ಗೌರವ ಕಾರ್ಯದರ್ಶಿಗಳಾದ ಶ್ರೀ ನಾಗರಾಜ ರೆಡ್ಡಿ ಯವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಮತ್ತು ರಾಜ್ಯ ಸಂಸ್ಥೆಯ ಶ್ರೀ ಎಂ.ಎ. ಚೆಲ್ಲಯ್ಯನವರು ಉಪಸ್ಥಿತರಿದ್ದರು. ಈ ಸಮಾರಂಭದಲ್ಲಿ ಹಿರಿಯ ಸ್ಕೌಟರ್ ಶ್ರೀ ರಂಗಯ್ಯನಾಯ್ಡು, ಹಿರಿಯ ಗೈಡರ್ ಶ್ರೀಮತಿ ಸೀತಾಲಕ್ಷ್ಮಿ ಹಾಗೂ ನ್ಯಾಷನಲ್ ಕಾಲೇಜ್ ಪ್ರಾಂಶುಪಾಲರನ್ನು ಸನ್ಮಾನಿಸಲಾಯಿತು.

ಶ್ರೀಮತಿ ಬಿ.ವಿ. ರಾಮಲತಾ ಸಹಾಯಕ ರಾಜ್ಯ ಆಯುಕ್ತರು ಶಿಬಿರದ ನಾಯಕಿಯಾಗಿದ್ದರು. ಸ.ರಾ.ಸಂ. ಆಯುಕ್ತರಾದ ಶ್ರೀ ಎ.ಎಂ. ಶಂಕರ್ ರವರು ಶಿಬಿರವನ್ನು ಸಂಘಟಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಡಿ.ಎಸ್. ಮನೋಹರ್ ನ್ಯಾಷನಲ್ ಕಾಲೇಜಿನ ಸಿಬ್ಬಂದಿ, ರೋವರ್ ಲೀಡರ್, ರೇಂಜರ್ ಲೀಡರ್ ಸ್ಥಳೀಯ ಕಾರ್ಯದರ್ಶಿ ಸಹಕರಿಸಿದರು.

# Congratulations

**The Scout/Guide Fraternity of Karnataka State heartily congratulates**






**Sri JAJARIA (Gold in Javelin throw)**

**Sri MARIYAPPAN THANGAVELU (Gold in High Jump)**

**Sri VARUN BHATIA (Bronze in High Jump)**

**Smt. DEEPA MALIK (Silver in Shot put)**

**For their achievement in Paralympics held at Rio and upholding India's Pride at the World Level.**



# ಪ್ರೇರಣಾ ಕಾರ್ಯಕ್ರಮ

ದಿನಾಂಕ 29.08.2016 ರಿಂದ 02.09.2016ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ಮತ್ತು ಉಡುಪಿ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಮೈಸೂರು ವಿಭಾಗೀಯ ಮಟ್ಟದ ರೇಂಜರ್ಸ್‌ಗಳಿಗೆ ಪ್ರೇರಣ ಶಿಬಿರದ ಉದ್ಘಾಟನೆಯು ಅಲೆವೂರಿನ ಡಾ॥ ವಿ ಎಸ್ ಆಚಾರ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿ ನಗರದಲ್ಲಿ ನಡೆಯಿತು.

ರಾಜ್ಯ ಸಂಸ್ಥೆಯ ಉಪಾಧ್ಯಕ್ಷೆ ಶ್ರೀಮತಿ ಶಾಂತಾ ವಿ. ಆಚಾರ್ಯ ಅವರು ಶಿಬಿರಕ್ಕೆ ಚಾಲನೆ ನೀಡಿದರು. ಜಿ.ಪಂ ಸಿಇಒ ಶ್ರೀಮತಿ ಪ್ರಿಯಾಂಕ ಮೇರಿ ಫ್ರಾನ್ಸಿಸ್ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಯಾಗಿ ಉದ್ಯಮಿ ಶ್ರೀಮತಿ ಯಶ್‌ಪಾಲ್ ಸುವರ್ಣ ಅವರು ಭಾಗವಹಿಸಿದ್ದರು. ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಮುಖರುಗಳಾದ ಶ್ರೀ ಎಡ್ವಿನ್ ಆಳ್ವ, ಶ್ರೀ ಶೇಖರ್ ಪೂಜಾರಿ, ಶ್ರೀಮತಿ ಜ್ಯೋತಿ ಜಿ .ಪೈ ಶ್ರೀ ಕೊಗ್ಗ ಗಾಣಿಗ, ಶ್ರೀಮತಿ ವನಿತಾ ರಾವ್, ಶ್ರೀ ಆನಂದ ಅಡಿಗ, ಶ್ರೀಮತಿ ಶಾಂತಾ ಕುಮಾರಿ, ಶ್ರೀಮತಿ ಸುಮನ ಶೇಖರ್ ಉಪಸ್ಥಿತರಿದ್ದರು. ಶ್ರೀಮತಿ ರಾಜಲಕ್ಷ್ಮಿ ಶೆಟ್ಟಿ ಸ್ವಾಗತಿಸಿದರು. ಶ್ರೀಮತಿ ಎಸ್. ಕೆ. ಪ್ರಭ ಪ್ರಸ್ಥಾವಿಕ ನುಡಿ ನುಡಿದರು. ಶ್ರೀಮತಿ ಸುನಿತಾ ಜೋಗಿ ಕಾರ್ಯಕ್ರಮ ನಿರೂಪಿಸಿದರು. ಶ್ರೀಮತಿ ಜ್ಯೋತಿ ಆಚಾರ್ಯ ವಂದಿಸಿದರು.



* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಹಾಗೂ ಜಿಲ್ಲಾ ಸಂಸ್ಥೆ, ಧಾರವಾಡ ಸಹಯೋಗದೊಂದಿಗೆ ದಿನಾಂಕ 20 ರಿಂದ 24 ಸೆಪ್ಟೆಂಬರ್ 2016ರ ವರೆಗೆ ಜಿಲ್ಲಾ ಸಂಸ್ಥೆ ಧಾರವಾಡ ಇಲ್ಲಿ ವಿಭಾಗೀಯ ಮಟ್ಟದ ಪ್ರೇರಣಾ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು.

ಸದರಿ ಕಾರ್ಯಕ್ರಮದಲ್ಲಿ ಮಹಿಳೆಯ ಶಕ್ತಿ, ಗುರಿ, ಸಾಧನೆ, ಧೈರ್ಯ, ವಿಚಾರಪರತೆ, ಆರ್ಥಿಕವಾಗಿ, ಸಾಮಾಜಿಕವಾಗಿ, ಸ್ವಾವಲಂಬಿಯಾಗಿ ಬದುಕಿ ಸಾಧಿಸಿ ತೋರಿಸಿದವರ ಮಾದರಿ ಜೀವನದ ಯಶೋಗಾಥೆಯನ್ನು ರೇಂಜರ್ಸ್‌ಗಳಿಗೆ ನೀಡಲಾಯಿತು.

ಶ್ರೀಮತಿ ಎನ್ .ಕೆ ಛಾಯ ಎಲ್.ಟಿ.(ಗೈ) ಸ್ಥಾನಿಕ ಆಯುಕ್ತರು (ತರಬೇತಿ) ಕಾರ್ಯಕ್ರಮದ ನಾಯಕಿಯಾಗಿದ್ದರು. ಶ್ರೀಮತಿ ಶಕುಂತಲ .ಎನ್, ರೇಂಜರ್ ಲೀಡರ್ , ಶ್ರೀಮತಿ ಗೀತಾ ನಟರಾಜ್ ಎಲ್. ಟಿ. ರಾಜ್ಯ ಆಯುಕ್ತರು (ಗೈ), ಶ್ರೀಮತಿ ಪ್ರಭಾ. ಎಂ ಲೋಂಡೆ, ಎಲ್.ಟಿ. ಜಿಲ್ಲಾ ಕಾರ್ಯದರ್ಶಿ ಧಾರವಾಡ ಶ್ರೀಮತಿ ಮಂಜುಳ. ಸಿ ರಾಜ್ಯ ಸಂಘಟನಾ ಆಯುಕ್ತರು ಸೇವೆ ಸಲ್ಲಿಸಿದರು.



ದಿನಾಂಕ 20.09.2016 ರಂದು ಮಧ್ಯಾಹ್ನ 3 ಗಂಟೆಗೆ ಪ್ರೇರಣಾ ಕಾರ್ಯಕ್ರಮ ಉದ್ಘಾಟನೆ ನೆರವೇರಿತು, ಶ್ರೀ ವಿನಯ ಕುಲಕರ್ಣಿ ಮಾನ್ಯ ಸಚಿವರು ಗಣಿ ಮತ್ತು ಭೂವಿಜ್ಞಾನ ಮತ್ತು ಧಾರವಾಡ ಜಿಲ್ಲಾ ಉಸ್ತುವಾರಿ ಸಚಿವರು ಕರ್ನಾಟಕ ಸರ್ಕಾರ ಇವರು ದೀಪ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿ, ಸ್ವತಃ ತಾವೇ ಶ್ರಮವಹಿಸಿ ದುಡಿಯುತ್ತಿರುವ ರೈತನ ವಿಷಯ , ಹೈನುಗಾರಿಕೆ ವಿಷಯ, ಹೆಣ್ಣು ಮಕ್ಕಳ ಸಬಲೀಕರಣಕ್ಕೆ ಅವಶ್ಯವಿರುವ ಸರಳವಾದ ಯೋಜನೆಗಳು ಮುಂತಾದ ವಿಷಯಗಳ ಬಗ್ಗೆ ಮಾತನಾಡಿದರು.

ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, 2ನೇ ದಿನ ಆಗಮಿಸಿ, ವಿಶ್ವ ಶಾಂತಿ ಸಂದೇಶವನ್ನು ಹಾಗೂ ಮಹಿಳೆಯರ ಸಾಧನೆಗಳ ಉದಾಹರಣೆಗಳನ್ನು ನೀಡಿ ಶಿಬಿರಾರ್ಥಿಗಳನ್ನು ಪ್ರೋತ್ಸಾಹಿಸಿದರು. ಶ್ರೀ ಎಸ್.ಜಿ. ಬೊಮ್ಮನಹಳ್ಳಿ, ಜಿಲ್ಲಾಧಿಕಾರಿಗಳು ಧಾರವಾಡ ಇವರು ಮಾತನಾಡಿ ಸಬಲೀಕರಣಕ್ಕೆ ಮಾರ್ಗದರ್ಶನ ನೀಡಿದರು. ಕಾರ್ಯಕ್ರಮದಲ್ಲಿ ಧಾರವಾಡ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು, ಶ್ರೀ ಎಂ.ಎಂ ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು ಉಪಸ್ಥಿತರಿದ್ದರು.



21.9.2016 ರಂದು ವಿಶ್ವ ಶಾಂತಿ ದಿನಾಚರಣೆಯನ್ನು ಆಚರಿಸಲಾಯಿತು. 150 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್, ರೇಂಜರ್ಸ್ ಪ್ರೇರಣಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಶ್ರೀ ಪಿ.ಜಿ.ಆರ್ ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಕಾರ್ಯಕ್ರಮ ಉದ್ಘಾಟಿಸಿ ಶಾಂತಿಯ ಮಹತ್ವವನ್ನು ತಿಳಿಸಿದರು. ಶ್ರೀ ಎಂ.ಎಂ ಲೋಂಡೆ, ಶ್ರೀಮತಿ ಪ್ರಭಾ ಲೋಂಡೆ ಇತರ ಜಿಲ್ಲಾ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಹಾಜರಿದ್ದರು.

ಶ್ರೀಮತಿ ರಜನಿದಾಸ್, ಶ್ರೀ ಎನ್.ಆರ್. ಪೀರ್‌ಜಾದೆ, ಶ್ರೀಮತಿ ಪ್ರಫುಲ್ಲಾ ನಾಯಕ್, ಶ್ರೀಮತಿ ವೀಣಾ ಅಠವಲೆ, ಶ್ರೀಮತಿ ರೇಖಾ ಜಂಗಾಟೆ, ಶ್ರೀಮತಿ ರತಿ ಶ್ರೀನಿವಾಸ್, ಶ್ರೀಮತಿ ಹೇಮಾ ಪಟ್ಟಣಶೆಟ್ಟಿ, ಶ್ರೀಮತಿ ಹನುಮಾಕ್ಷಿ ಗೋಗಿ, ಶ್ರೀಮತಿ ಜಯಶ್ರೀ ದೇಶಪಾಂಡೆ, ಶ್ರೀ ಎಚ್. ಡಿ. ಟಕ್ಕಳಕಿ ಹಾಗೂ ಶ್ರೀ ಎಂ.ಡಿ. ಪಾಟೀಲ್ ಇವರುಗಳು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು.

ಕಾರ್ಯಕ್ರಮದಲ್ಲಿ 140 ರೇಂಜರ್ಸ್ ಮತ್ತು ರೇಂಜರ್ಸ್ ಲೀಡರ್‌ಗಳು ಭಾಗವಹಿಸಿದ್ದರು. ಶ್ರೀಮತಿ ಪ್ರಭಾಲೊಂಡೆ ಎಲ್.ಟಿ (ಗೈ) ಜಿಲ್ಲಾ ಕಾರ್ಯದರ್ಶಿ, ಧಾರವಾಡ ಇವರು ಪ್ರೇರಣಾ ಕಾರ್ಯಕ್ರಮದ ಉಸ್ತುವಾರಿ ವಹಿಸಿದ್ದರು.

## ರಾಜ್ಯಮಟ್ಟದ ಕಬ್ಸ್-ಬುಲ್‌ಬುಲ್ಸ್‌ಗಳ ಪದಕ ಸಿದ್ಧತಾ ಶಿಬಿರ

ದಿನಾಂಕ 30-08-2016 ರಿಂದ 01-09-2016 ರ ವರೆಗೆ ರಾಜ್ಯಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳ ಪದಕ ಸಿದ್ಧತಾ ಶಿಬಿರ ಜಿಲ್ಲಾ ಗುರುಭವನ ಹಾವೇರಿಯಲ್ಲಿ ಸಂಘಟಿಸಲಾಯಿತು. ಶಿಬಿರದ ಉದ್ಘಾಟನೆಯನ್ನು ಸಸಿಗೆ ನೀರು ಹಾಕುವ ಮೂಲಕ ನೆರವೇರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಶರತ್ ಮಲ್ಲನಗೌಡ್ರ, ಜಿಲ್ಲಾ ಖಜಾಂಚಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಸಿ. ಮಂಜುಳಾ ರಾಜ್ಯ ಸಂಘಟನಾ ಆಯುಕ್ತರು (ಗೈ.) ಶ್ರೀ ಮೃತ್ಯುಂಜಯ ಗೌಡ, ದೈಹಿಕ ಶಿಕ್ಷಣ ಪರಿವೀಕ್ಷಕರು, ಸವಣೂರ, ಶ್ರೀ ಮಲ್ಲಕಾರ್ಜನ ಕೊಟ್ಟೂರ. ಜಿಲ್ಲಾ ಸ್ಥಾನಿಕ ಆಯುಕ್ತರು, ಶ್ರೀಮತಿ ಸಂಧ್ಯಾರಾಣಿ, ಶಿಬಿರದ ನಾಯಕಿ, (ಕಬ್ಸ್ ವಿಭಾಗ) ಶ್ರೀಮತಿ ನಾಗರತ್ನಮ್ಮ ಬುಲ್‌ಬುಲ್ಸ್ ವಿಭಾಗ ಇವರುಗಳು ಉಪಸ್ಥಿತರಿದ್ದರು. ದಿನಾಂಕ 01-09-2016 ರಂದು ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.



ಮುಕ್ತಾಯ ಸಮಾರಂಭದಲ್ಲಿ ಶ್ರೀ ಕೊಟ್ರೇಶಪ್ಪಾ ಬಸೇಗಣ್ಣಿ, ಅಧ್ಯಕ್ಷರು, ಜಿಲ್ಲಾ ಪಂಚಾಯತ, ಹಾವೇರಿ, ಶ್ರೀಮತಿ ಪಾರ್ವತೆವ್ವನ ಹಲಗಣ್ಣನವರ, ಅಧ್ಯಕ್ಷರು, ನಗರಸಭೆ, ಹಾವೇರಿ. ಶ್ರೀ ಸಂಜೀವಕುಮಾರ್, ನೀರಲಗಿ ಅಧ್ಯಕ್ಷರು. ನಗರಾಭಿವೃದ್ಧಿ ಪ್ರಾಧಿಕಾರ, ಹಾವೇರಿ. ಶ್ರೀ ಎಮ್.ಬಿ. ಅಂಬಿಗೇರ ಬಿ.ಇ.ಓ., ಹಾವೇರಿ ಶ್ರೀ ಜಿ.ಎಚ್.ಎನ್. ರಾವಳ, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು ಡಿ.ಡಿ.ಪಿ.ಆಯ್. ಆಫೀಸ, ಹಾವೇರಿ ಭಾಗವಹಿಸಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಆರ್.ಆರ್. ಕಾಶಪ್ಪನವರ ಜಿಲ್ಲಾ ಕಾರ್ಯದರ್ಶಿ ವಹಿಸಿದ್ದರು ಹಾಗೂ ಶ್ರೀ ಮಲ್ಲಿಕಾರ್ಜುನ ಕೊಟೂರ, ಶ್ರೀ ರವಿ ಹಿಂಚಿಗೇರಿ, ಸ್ಥಾನಿಕ ಆಯುಕ್ತರು ಭಾಗವಹಿಸಿದ್ದರು.

64 ಕಬ್ಸ್, 60 ಬುಲ್‌ಬುಲ್ಸ್, 20 ಶಿಕ್ಷಕ/ಕಿಯರು ಭಾಗವಹಿಸದ್ದರು. ಕಬ್ಸ್ ವಿಭಾಗದ ಶಿಬಿರದ ನಾಯಕಿಯಾಗಿ ಶ್ರೀಮತಿ ಸಂಧ್ಯಾರಾಣಿ, ಚಿಕ್ಕಮಗಳೂರ, ಬುಲ್‌ಬುಲ್ಸ್ ವಿಭಾಗದ ಶಿಬಿರದ ನಾಯಕಿಯಾಗಿ ಶ್ರೀಮತಿ ನಾಗರತ್ನಮ್ಮ ಮೈಸೂರು ರವರು ಭಾಗವಹಿಸಿದ್ದರು.

## ರಾಜ್ಯ ಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಗೆ ಪದಕ ತರಬೇತಿ ಶಿಬಿರ



ಭಾರತ ಸ್ಕೌಟ್ಸ್ ಮತ್ತು ಕರ್ನಾಟಕ ಹಾಗೂ ಜಿಲ್ಲಾ ಸಂಸ್ಥೆ ಬೆಳಗಾವಿ ಇವರ ಸಂಯುಕ್ತ ಆಶ್ರಯದಲ್ಲಿ ಬೆಳಗಾವಿ ನಗರದ ಜೈನ್ ಹೆರಿಟೇಜ್ ಶಾಲೆಯಲ್ಲಿ ದಿ: 15 ರಿಂದ 17 ಸೆಪ್ಟೆಂಬರ್ 2016 ರವರೆಗೆ ರಾಜ್ಯ ಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಗೆ ಪದಕ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ರಾಜ್ಯದ 9 ಜಿಲ್ಲೆಗಳಿಂದ 260 ಮಕ್ಕಳು, 30 ಜನ ಕಬ್ ಮಾಸ್ಟರ್/ ಫ್ಲಾಕ್ ಲೀಡರ ಹಾಗೂ 10 ಜನ ಸಿಬ್ಬಂದಿವರ್ಗ ಭಾಗವಹಿಸಿದ್ದರು.

ದಿನಾಂಕ 15-09-2016ರಂದು ಶಿಬಿರದ ಉದ್ಘಾಟನಾ ಕಾರ್ಯಕ್ರಮ ಜರುಗಿತು. ಉದ್ಘಾಟಕರಾಗಿ ಶ್ರೀಯುತ ಎನ್.ಜಯರಾಮ ಆಗಮಿಸಿದ್ದರು. ಶ್ರೀ ಜಿ.ಬಿ. ಮನ್ನಿಕೇರಿ ಉಪನಿರ್ದೇಶಕರು ಚಿಕ್ಕೋಡಿ ಮತ್ತು ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಬೆಳಗಾವಿ, ಶ್ರೀ ಎಸ್.ವೈ.ಹಳಿಂಗಳಿ ಉಪನಿರ್ದೇಶಕರು ಬೆಳಗಾವಿ, ಶ್ರೀ ಬಿ.ಎಂ. ನಲತವಾಡ, ಶ್ರೀ ಎಸ್.ಸಿ.ಕಟ್ಟಿಮನಿ, ಶ್ರೀ ಟಿ.ಬಿ.ಕಾಂಬೋಜಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ.ನದಾಫ, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಆರ್.ಎಂ.ನಿಂಬಾಳಕರ, ಜೆ.ಜಿ.ಆಯ್. ನಿರ್ದೇಶಕರಾದ ಆರ್.ಜಿ ಧಾರವಾಡಕರ, ಪ್ರಾಚಾರ್ಯರಾದ ಶ್ರೀ ಮಂಜಿತ ಜೈನ್, ಕಬ್ ವಿಭಾಗದ ನಾಯಕರಾದ ಶ್ರೀ ಎನ್. ಕೃಷ್ಣಮೂರ್ತಿ, ಫ್ಲಾಕ ವಿಭಾಗದ ನಾಯಕಿ ಶ್ರೀಮತಿ ಎಸ್.ಸಿ. ನರವಟೆ ಉಪಸ್ಥಿತರಿದ್ದರು. ದಿನಾಂಕ 17-09-2016 ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಲಾಗಿತ್ತು.

## ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ರೋವರ್-ರೇಂಜರ್ ಹಾಗೂ ವಯಸ್ಕ ನಾಯಕರ ಗಮನಕ್ಕೆ

ನೀವು ಭಾಗವಹಿಸಿದ ಶಿಬಿರಗಳು ಅಲ್ಲಿ ಪಡೆದ ಅನುಭವ, ವಿಶೇಷ ಘಟನೆಗಳು, ಸ್ಕೌಟಿಂಗ್-ಗೈಡಿಂಗ್‌ಗೆ ಸಂಬಂಧಪಟ್ಟ ಕವನಗಳು, ಉಪಯುಕ್ತ ಲೇಖನಗಳು, ಆಟಗಳು ನೂತನ ಕಲಿಕಾ ವಿಧಾನಗಳು ಮುಂತಾದ ಉಪಯುಕ್ತ ವಿಷಯಗಳ ಬಗ್ಗೆ ಎರಡು ಪುಟಕ್ಕೆ ಮೀರದಂತೆ ಲೇಖನಗಳನ್ನು, ನಿಮ್ಮ ಇತ್ತೀಚಿನ ಸಮವಸ್ತ್ರ ಸಹಿತ ಭಾವಚಿತ್ರದೊಡನೆ ಕಳುಹಿಸಿ ಸೂಕ್ತ ಕಂಡವುಗಳನ್ನು ಮಾಸಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

– ಸಂಪಾದಕರು

# ಜಿಲ್ಲಾ ವಾರ್ತೆಗಳು

## ಬೆಂಗಳೂರು ಉತ್ತರ ಜಿಲ್ಲೆ

ದಿನಾಂಕ 27-08-2016 ರಂದು ಬಾಣಸವಾಡಿ ಲೋಕಲ್ ಅಸೋಸಿಯೇಷನ್ ವತಿಯಿಂದ ಎಸ್.ಜೆ.ಆರ್. ಪಬ್ಲಿಕ್ ಶಾಲೆಯಲ್ಲಿ, ಬ್ಯಾಡ್ಜ್ ವರ್ಕ್ ಕ್ಯಾಂಪ್ ನಡೆಯಿತು. ವಿವಿಧ ಶಾಲೆಗಳಿಂದ 40 ಕಬ್ಸ್, 56 ಬುಲ್‌ಬುಲ್ಸ್, 91 ಸ್ಕೌಟ್ಸ್, 37 ಗೈಡ್ಸ್, 17 ಯೂನಿಟ್ ಲೀಡರ್ಸ್ ಹೀಗೆ ಒಟ್ಟು 241 ಮಂದಿ ಭಾಗವಹಿಸಿದ್ದರು.

. ಶಾಲೆಯ ಪ್ರಾಂಶುಪಾಲರು, ಅಸೋಸಿಯೇಷನ್ ಉಪಾಧ್ಯಕ್ಷರಾದ ಶ್ರೀಮತಿ ಅಂಜನಾ ನಿಸ್ಸಾರವರು, ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ಸಂಪತ್ ಕುಮಾರ್, ಎ.ಡಿ.ಸಿ., ಉಪಸ್ಥಿತರಿದ್ದರು.. ಕಾರ್ಯದರ್ಶಿಗಳಾದ ಯೋಗಶ್ರೀ ಶ್ರೀ ವರ್ಧಮಾನ ಕಳಸೂರು, ಸರ್ವರನ್ನು ಸ್ವಾಗತಿಸಿದರು.



* The Shivajinagar Local Association organised Patrol Leaders and Sixer's Camp on 20-08-2016 at Mitralaya Girls School. 125 Cubs, Bulbulls, Scouts & Guides participated. One more camp was conducted on 27-08-2016 at Francies X'vier High School Fraser Town. Bengaluru.

## ಬೆಳಗಾವಿ

* ದಿನಾಂಕ 19-08-2016 ರಿಂದ 22-08-2016 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ ಬೆಳಗಾವಿ ಇವರ ವತಿಯಿಂದ ರೋವರ್ ಮತ್ತು ರೇಂಜರ್‌ಗಳಿಗೆ ಸೋಮವ್ವ ಚ. ಅಂಗಡಿ ಸರಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ, ಕೆ.ಕೆ. ಕೊಪ್ಪ ಇಲ್ಲಿಜಿಲ್ಲಾ ಮಟ್ಟದ ಸಮುದಾಯ ಅಭಿವೃದ್ಧಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಉದ್ಘಾಟನೆಯಲ್ಲಿ ಡಾ॥ ಟಿ.ಬಿ. ಕೋಲಕಾರ, ಪ್ರಾಚಾರ್ಯರು, ಸ.ಪ್ರ.ದ.ಕಾ. ಕೆ.ಕೆ. ಕೊಪ್ಪ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಗಂಗವ್ವ ಕುರಬರ ಸಿ.ಡಿ.ಸಿ. ಸದಸ್ಯರು, ಶ್ರೀ ಸುನೀಲ ನಂದಿ, ಶ್ರೀ ರುದ್ರಪ್ಪ ಸಂಪಗಾವಿ ಉಪಸ್ಥಿತರಿದ್ದರು.



ಸದರಿ ಶಿಬಿರದಲ್ಲಿ ರೋವರ್ ವಿಭಾಗದ ನಾಯಕರಾದ ಶ್ರೀ ವಿ.ಎ. ಸಾತಪುತೆ ಹಾಗು ರೇಂಜರ್ ವಿಭಾಗದಲ್ಲಿ ಶ್ರೀಮತಿ ಶಶಿರೇಖಾ ಪಿ.ಕೆ. ನಾಯಕಿಯಾಗಿ ಕಾರ್ಯನಿರ್ವಹಿಸಿದರು. ಶಿಬಿರದಲ್ಲಿ ಒಟ್ಟು 74 ರೋವರ್‌ಗಳು ಹಾಗೂ 75 ರೇಂಜರ್‌ಗಳು ವಿವಿಧ ಕಾಲೇಜುಗಳಿಂದ ಆಗಮಿಸಿದ್ದರು. ಶಿಬಿರದ ಮೇಲ್ವಿಚಾರಣೆಯನ್ನು ಜಿಲ್ಲಾ ಸಂಘಟಕರಾದ ಶ್ರೀ ಡಿ.ಬಿ. ಅತ್ತಾರ, ಶ್ರೀ ವಿಠ್ಠಲ ಎಸ್.ಬಿ., ಶ್ರೀ ಬಿ.ಜಿ. ಜನಕಟ್ಟಿ ಇವರು ನಿರ್ವಹಿಸಿದರು.

ದಿನಾಂಕ 20-08-2016 ಬೆಳಗ್ಗೆ 10-30 ಕ್ಕೆ ಡಾ॥ ಎಂ.ಎಸ್. ಪಲ್ಲೇದ ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳು, ಬೆಳಗಾವಿ ಹಾಗೂ ಸಿಬ್ಬಂದಿ ವರ್ಗದವರಿಂದ ಸಾಂಕ್ರಾಮಿಕ ರೋಗಗಳು ಹಾಗೂ ಅವುಗಳನ್ನು ತಡೆಗಟ್ಟುವ ಮುನ್ನೆಚ್ಚರಿಗೆ ಕ್ರಮಗಳ ಬಗ್ಗೆ ಸಮಗ್ರವಾದ ಮಾಹಿತಿ ನೀಡಿದರು. ನಂತರ ಶ್ರೀ ವಿ.ಎಸ್. ಟಕ್ಕೇಕರ, ಠಾಣಾಧಿಕಾರಿಗಳು ಅಗ್ನಿ ಶಾಮಕದಳ ಬೆಳಗಾವಿ ಇವರು ಹಾಗೂ ಇವರ ಸಿಬ್ಬಂದಿ ವರ್ಗದವರಿಂದ ಅಗ್ನಿ ಅನಾಹುತ ಹಾಗೂ ಅವುಗಳನ್ನು ತಡೆಗಟ್ಟುವ ಮುನ್ನೆಚ್ಚರಿಕೆಗಳ ಬಗ್ಗೆ ಅಣಕು ಪ್ರದರ್ಶನದ ಮೂಲಕ ಸಮಗ್ರ ಮಾಹಿತಿ ನೀಡಿದರು. ನಂತರ ಶ್ರೀ ಸುರೇಶ ಕುಂದರಗಿ ಆರೋಗ್ಯ ಇಲಾಖೆ ಹಿರೇಬಾಗೇವಾಡಿ ಹಾಗೂ ಅವರ ಸಿಬ್ಬಂದಿಯವರು ಶಿಬಿರಕ್ಕೆ ಆಗಮಿಸಿ ಪ್ರಥಮ ಚಿಕಿತ್ಸೆ ಮತ್ತು ಆಂಬುಲೆನ್ಸ್ ಬಗ್ಗೆ ಅಣಕು ಪ್ರದರ್ಶನದ ಮೂಲಕ ಸಂಪೂರ್ಣವಾದ ಮಾಹಿತಿಯನ್ನು ನೀಡಿದರು.

ದಿನಾಂಕ 21-08-2016 ರಂದು ಮಾನ್ಯ ಸಂಸತ್ ಸದಸ್ಯರಾದ ಶ್ರೀ ಸುರೇಶ ಚ. ಅಂಗಡಿ ಹಾಗೂ ಸನ್ಮಾನ್ಯ ಶ್ರೀ ಸಂಜಯ ಬಿ. ಪಾಟೀಲ, ಶಾಸಕರು ಬೆಳಗಾವಿ ಗ್ರಾಮೀಣ, ಶ್ರೀಮತಿ ಮಹಾದೇವಿ ರಾಯಣ್ಣವರ ಅಧ್ಯಕ್ಷರು ಗ್ರಾ.ಪಂ. ಕೆ.ಕೆ. ಕೊಪ್ಪ ಹಾಗೂ ಗ್ರಾಮ ಗುರುಹಿರಿಯರು ಶಿಬಿರಕ್ಕೆ ಆಗಮಿಸಿ ಎಲ್ಲಾ ರೋವರ್-ರೇಂಜರ್‌ಗಳಿಗೆ ಶುಭ ಹಾರೈಸಿದರು. ರೋವರ್-ರೇಂಜರ್‌ಗಳು ಕೆ.ಕೆ. ಕೊಪ್ಪ ಗ್ರಾಮದಲ್ಲಿ ಸಾಂಕ್ರಾಮಿಕ ರೋಗಗಳು ಹಾಗೂ ಅವುಗಳನ್ನು ತಡೆಗಟ್ಟುವ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ಬೀದಿ ನಾಟಕಗಳ ಮೂಲಕ ಬೃಹತ್ ಜಾಥಾವನ್ನು ಕೈಗೊಂಡು ಗ್ರಾಮದ ಸ. ಪ್ರಾಥಮಿಕ ಆರೋಗ್ಯ ಕೇಂದ್ರದ ಸುತ್ತಲು ಹಾಗೂ ಸ.ಹಿ.ಪ್ರಾ.ಶಾಲೆ ಆವರಣದಲ್ಲಿ ಸ್ವಚ್ಛತಾ ಕಾರ್ಯ ಮಾಡಿ ಗಿಡಗಳನ್ನು ನೆಟ್ಟರು. ರೇಂಜರ್‌ಗಳು ಗ್ರಾಮದ ಮನೆಗಳಿಗೆ ತೆರಳಿ ಮನೆಗೊಂದು ಶೌಚಾಲಯ, ಮನೆಯ ಸುತ್ತಲು ಸ್ವಚ್ಛತೆಯನ್ನು ಕಾಪಾಡಿಕೊಂಡು ಸಾಂಕ್ರಾಮಿಕ ರೋಗಗಳನ್ನು ನಿಯಂತ್ರಿಸಲು ಕೈಗೊಳ್ಳಬೇಕಾದ ಮುನ್ನೆಚ್ಚರಿಗೆ ಕ್ರಮಗಳ ಮಾಹಿತಿ ನೀಡಿ ಗ್ರಾಮಸ್ಥರ ಮೆಚ್ಚುಗೆಗೆ ಪಾತ್ರರಾದರು. ಸಂಜೆ ಗ್ರಾಮದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯ ಆವರಣದಲ್ಲಿ ಭವ್ಯ ಶಿಬಿರಾಗ್ನಿಯನ್ನು ಹಮ್ಮಿಕೊಳ್ಳಲಾಗಿತ್ತು. ದಿನಾಂಕ 22-08-2016 ರಂದು ಬೆಳಗ್ಗೆ 7.30ಕ್ಕೆ ಸರ್ವಧರ್ಮ ಸಮನ್ವಯ ಪ್ರಾರ್ಥನೆ ಜರುಗಿತು.

* ದಿನಾಂಕ 12-08-2016 ರಂದು ಸರದಾರ್ ಸರಕಾರಿ ಪದವಿ ಪೂರ್ವ ಮಹಾವಿದ್ಯಾಲಯ ಬೆಳಗಾವಿ ಇಲ್ಲಿ ಜಿಲ್ಲಾ ಮಟ್ಟದ ಒಂದು ದಿನದ ಸ್ಕೌಟಿಂಗ್ ಪರಿಚಯಾತ್ಮಕ ಶಿಬಿರವನ್ನು ಪದವಿಪೂರ್ವ ಕಾಲೇಜು ಉಪನ್ಯಾಸಕರುಗಳಿಗೆ ಏರ್ಪಡಿಸಲಾಗಿತ್ತು.

ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಎಂ.ಎಫ್. ಗುರವ, ಉಪನಿರ್ದೇಶಕರು ಪ.ಪೂ.ಶಿ. ಇಲಾಖೆ ಇವರು ನೆರವೇರಿಸಿದರು. ಶ್ರೀ ಎಲ್.ಎಸ್. ಪಾಟೀಲ, ಪ್ರಾಚಾರ್ಯರು ಸರದಾರ್ಸ್ ಸ.ಪ.ಪೂ. ಕಾಲೇಜು, ಬೆಳಗಾವಿ ಇವರು ಭಾಗವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ ಹುಡೇದ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ಉಪಸ್ಥಿತರಿದ್ದರು. ಶಿಬಿರದ ನಾಯಕರಾಗಿ ಶ್ರೀ ರಾಜೇಶ್ ಎ.ವಿ. ಕಾರ್ಯನಿರ್ವಹಿಸಿದರು. ಶಿಬಿರದಲ್ಲಿ ಒಟ್ಟು 150 ಉಪನ್ಯಾಸಕರು ಭಾಗವಹಿಸಿದ್ದರು.

## ಬಳ್ಳಾರಿ

ದಿನಾಂಕ : 25.08.2016 ರಿಂದ 31.08.2016 ರ ವರೆಗೆ ಜ್ಞಾನ ಮಂಟಪ, ಕೂಡ್ಲಿಗಿ, ಗುಂಡಿನ ಹೊಳೆಯಲ್ಲಿ ವಿವಿಧ ವಯಸ್ಕ ನಾಯಕ-ನಾಯಕಿಯರುಗಳ ತರಬೇತಿ ಶಿಬಿರಗಳು ನಡೆದವು

| ಕ್ರ. ಸಂ. | ಶಿಬಿರ | ಅಭ್ಯರ್ಥಿಗಳ ಸಂಖ್ಯೆ | ಶಿಬಿರದ ನಾಯಕ-ನಾಯಕಿಯರುಗಳು |
|---|---|---|---|
| 1. | ಕಬ್ ಮಾಸ್ಟರ್ಸ್‌ಗಳ ಮುಂದುವರೆದ ತರಬೇತಿ ಶಿಬಿರ | 14 | ಶ್ರೀನಾಯಕ್ ಬೊಮ್ಮನ್, ಎ.ಎಲ್.ಟಿ.(ಸಿ) |
| 2. | ಸ್ಕೌಟ್ ಮಾಸ್ಟರ್‌ಗಳ ಮೂಲ ತರಬೇತಿ ಶಿಬಿರಗಳು (2) | 61 | ಶ್ರೀ ಫಿರೋಜ್ ಪಾಷ, ಎಲ್.ಟಿ.(ಎಸ್)<br>ಶ್ರೀ ಪಿ. ಮಂಜುನಾಥ್, ಎ.ಎಲ್.ಟಿ. (ಎಸ್) |
| 3. | ಫ್ಲಾಕ್ ಲೀಡರ್‌ಗಳ ಮೂಲ ತರಬೇತಿ ಶಿಬಿರ | 19 | ಶ್ರೀಮತಿ ಜಯಶ್ರೀ ಜೋಷಿ, ಎ.ಎಲ್.ಟಿ.(ಬಿ) |
| 4 | ಗೈಡ್ ಕ್ಯಾಪ್ಟನ್‌ಗಳ ಮೂಲ ತರಬೇತಿ ಶಿಬಿರ | 36 | ಸಿಸ್ಟರ್ ಸಿಂಥಿಯಾ, ಎಲ್.ಟಿ. (ಜಿ) |

ಶಿಬಿರಗಳ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಯುವರಾಜ ನಾಯಕ್ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೂಡ್ಲಿಗಿ ಹಾಗೂ ಸ್ಥಳೀಯ ಸಂಸ್ಥೆ ಅಧ್ಯಕ್ಷರು ವಹಿಸಿದ್ದರು. ಶ್ರೀ ವೆಂಕಟೇಶ್ ತಾಲ್ಲೂಕ ಪಂಚಾಯತಿ ಅಧ್ಯಕ್ಷರು, ಶ್ರೀ ಕೋಟ್ರಪ್ಪ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರು, ಶ್ರೀ ರಹಮತುಲ್ಲಾ, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿ ಹಾಗೂ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರು, ಶ್ರೀ ಜಿ. ಉಮೇಶ, ಮಾಜಿ ಅಧ್ಯಕ್ಷರು ಜಿಲ್ಲಾ ಪಂಚಾಯತ್ ಉಪಸ್ಥಿತರಿದ್ದರು.






ಶ್ರೀ ಕೆ. ಹಾಲೇಶ್ ಪೋಲಿಸ್ ಸಹಾಯಕ ನಿರೀಕ್ಷಕರು ಮತ್ತು ಶ್ರೀ ಎಲ್. ಕೃಷ್ಣಮೂರ್ತಿ, ತಹಶಿಲ್ದಾರ್ ಇವರುಗಳು ಶಿಬಿರಾಗ್ನಿ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದರು.

ದಿನಾಂಕ 30-08-2016 ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ಡಾ. ಕೆ. ವೀರೇಶ್, ಜಿಲ್ಲಾ ಆಯುಕ್ತರು (ಸ್ಕೌ) ಅಧ್ಯಕ್ಷತೆ ವಹಿಸಿದ್ದರು. ಶ್ರೀ ಎ.ಎಂ. ಮಲ್ಲಿಕಾರ್ಜುನಯ್ಯ, ಶ್ರೀ ಎಂ.ಟಿ. ಮಲ್ಲೇಶ್, ಜಿಲ್ಲಾ ಉಪಾಧ್ಯಕ್ಷರುಗಳು ಶ್ರೀ ಮಂಜುನಾತ್, ಹಿರಿಯ ಉಪನ್ಯಾಸಕರು ಡಯಟ್, ಶ್ರೀ ಜಿ. ಉಮೇಶ್, ಅಧ್ಯಕ್ಷರು, ಶ್ರೀಮತಿ ವಾಣಿ, ಆಡಳಿತಾಧಿಕಾರಿಗಳು ಶ್ರೀ ಶ್ರೀಧರ್, ಕಾರ್ಯದರ್ಶಿ ಮುಂತಾದವರು ಉಪಸ್ಥಿತರಿದ್ದರು.

## ಬೀದರ

ದಿನಾಂಕ 18-08-2016 ರಂದು ಜ್ಞಾನಪ್ರಿಯ ಶಾಲೆ ಬಸವಕಲ್ಯಾಣದ ಸ್ಕೌಟ್ಸ್-ಗೈಡ್ಸ್, ಕಬ್-ಬುಲ್‌ಬುಲ್ಸ್‌ಗಳು ಹಾಗೂ ಶಾಲಾ ಆಡಳಿತ ಮಂಡಳಿ ಮತ್ತು ಶಿಕ್ಷಕರ ವತಿಯಿಂದ ರಕ್ಷಾಬಂಧನದ ಕಾರ್ಯಕ್ರಮವನ್ನು ನಗರದ ಪೋಲಿಸ್ ಠಾಣೆ, ಗಾಂಧಿ ಚೌಕದಲ್ಲಿ ಹಮ್ಮಿಕೊಳ್ಳಲಾಗಿತ್ತು. ಮಕ್ಕಳು ಪೋಲಿಸರಿಗೆ ರಾಖಿ ಕಟ್ಟುವ ಮೂಲಕ ಭ್ರಾತೃತ್ವದ ಪ್ರೇಮವನ್ನು

ತೋರಿಸಿದರು. ಪೋಲಿಸರು ದಿನನಿತ್ಯ ಸಮಾಜಕ್ಕಾಗಿ ಹಗಲಿರುಳೆನ್ನದೆ ದುಡಿಯುತ್ತಿರುತ್ತಾರೆ. ಸದ ಜನರ ರಕ್ಷಣೆಗಾಗಿ ನಿಂತಿರುತ್ತಾರೆ. ಹಾಗಾಗಿ ನಮ್ಮನ್ನು ರಕ್ಷಿಸುತ್ತಿರುವ ಅವರಿಗೆ ಆ ದೇವರು ಇನ್ನಷ್ಟು ಧೈರ್ಯ ಆತ್ಮಸ್ಥೈರ್ಯ ಮತ್ತು ಶಕ್ತಿ ನಿಡಲೆಂದು ಮಕ್ಕಳು ಪ್ರಾರ್ಥಿಸಿದರು. ದೇಶಕ್ಕಾಗಿ ಹೋರಾಡುತ್ತಿರುವ ಸೈನಿಕರ ಕುರಿತು ಒಂದು ಚಿಕ್ಕ ಕಿರುನಾಟಕವನ್ನು ಪ್ರದರ್ಶಿಸಿದರು.

* ದಿನಾಂಕ 21-09-2016 ರಂದು ಜ್ಞಾನಪ್ರಿಯಾ ಶಾಲೆಯಲ್ಲಿ "ವಿಶ್ವಶಾಂತಿ" ದಿನಾಚರಣೆಯನ್ನು ಆಚರಿಸಲಾಯಿತು. ಕಾರ್ಯಕ್ರಮದಲ್ಲಿ ಅಧ್ಯಕ್ಷೀಯ ಸ್ಥಾನವನ್ನು ಶಾಲೆಯ ಮುಖ್ಯೋಪಾಧ್ಯಾಯನಿಯವರಾದ ಸಿಸ್ಟರ್ ಆವೀಯಾರವರು ವಹಿಸಿದ್ದರು. ಶಿಕ್ಷಕಿ ಕು. ಮಂದಾಕಿನಿಯವರ ನೇತೃತ್ವದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಇಂದಿನ ಸಮಾಜದಲ್ಲಿ ಆಗುತ್ತಿರುವ ದೌರ್ಜನ್ಯ, ಅನ್ಯಾಯ, ಲಂಚಕೋರತನದ ಕುರಿತು ಕಿರು ನಾಟಕದ ಮೂಲಕ ಶಾಂತಿ ಮತ್ತು ನೆಮ್ಮದಿಯ ಬದುಕು ಸಾಗಿಸಬೇಕೆಂಬ ಸಂದೇಶವನ್ನು ನೀಡಿದರು. ಅದೆ ರೀತಿ ದೇಶದ ಸಲುವಾಗಿ ಹೋರಾಡಿದ ವೀರ ಯೋಧರ ಆತ್ಮ ಶಾಂತಿಗಾಗಿ ಎಲ್ಲರೂ ಸೇರಿ ಪ್ರಾರ್ಥಿಸಿದರು.

## ಚಿತ್ರದುರ್ಗ

ದಿನಾಂಕ 15-08-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್, ಚಿತ್ರದುರ್ಗ ಜಿಲ್ಲಾ ಸಂಸ್ಥೆ ಆವರಣದಲ್ಲಿ ರಾಷ್ಟ್ರಧ್ವಜಾರೋಹಣ ಮಾಡುವುದರೊಂದಿಗೆ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ಸುರೇಶ್ ರಾಜ್, ಜಿಲ್ಲಾ ಸ್ಕೌಟ್ಸ್ ಆಯುಕ್ತರು ಸ್ವಾತಂತ್ರ್ಯ ದಿನಾಚರಣೆ ಕುರಿತು ಮಾತನಾಡಿದರು. ಶ್ರೀ ಅನ್ವರ್ ಭಾಷಾ ಜಿಲ್ಲಾ ಖಜಾಂಚಿ, ಶ್ರೀಮತಿ ಸಿ.ಪಿ. ಸುಶೀಲ ಜಿಲ್ಲಾ ಗೈಡ್ಸ್ ತರಬೇತಿ ಆಯುಕ್ತರು, ಶ್ರೀ ವೈಬಿ. ಮಹೇಂದ್ರನಾಥ ಸಹ ಕಾರ್ಯದರ್ಶಿ, ಶ್ರೀಮತಿ ರೀನಾವೀರಭದ್ರಪ್ಪ ಜಂಟಿ ಕಾರ್ಯದರ್ಶಿ, ಶ್ರೀಮತಿ ನಾಗಲತಾ, ಜಿಲ್ಲಾ ಸಂಘಟಕರು (ಗೈಡ್ಸ್) ಶ್ರೀಮತಿ ಪದ್ಮಾವತಿ, ಗೈಡ್ ಕ್ಯಾಪ್ಟನ್, ಶ್ರೀ ಟಿ. ಕರಿಸಿದ್ದಪ್ಪ ಜಿಲ್ಲಾ ಸಂಘಟಕರು ಚಿತ್ರದುರ್ಗ ಇವರು ಉಪಸ್ಥಿತರಿದ್ದರು. ಜಿಲ್ಲಾಡಳಿತವು ಏರ್ಪಡಿಸಿದ್ದ ಪಥ ಸಂಚಲನದಲ್ಲಿ ಒಟ್ಟು 4 ತಂಡಗಳು ಆಯ್ಕೆಗೊಂಡು ಭಾಗವಹಿಸಿದ್ದವು. ಮಾನ್ಯ ಜಿಲ್ಲಾ ಉಸ್ತುವಾರಿ ಹಾಗೂ ಸಮಾಜ ಕಲ್ಯಾಣ, ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರಾದ ಶ್ರೀ ಹೆಚ್. ಆಂಜನೇಯರವರು ಬಹುಮಾನ ನೀಡಿದರು. ಚಿತ್ರದುರ್ಗ ಸಂಸದರಾದ ಮಾನ್ಯಶ್ರೀ ಬಿ.ಎನ್. ಚಂದ್ರಪ್ಪ, ಚಿತ್ರದುರ್ಗ ಶಾಸಕರಾದ ಮಾನ್ಯ ಶ್ರೀ ಜಿ.ಹೆಚ್. ತಿಪ್ಪಾರೆಡ್ಡಿ ಹಾಗೂ ಶ್ರೀ ಎಂ.ಕೆ. ಶ್ರೀರಂಗಯ್ಯ, ಜಿಲ್ಲಾದಿಕಾರಿಗಳು ಹಾಗು ಅಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ರವರು ಉಪಸ್ಥಿತರಿದ್ದರು.

* ದಿನಾಂಕ 23-08-2016 ರಂದು ದಿ॥ ರಾಜೀವ ಗಾಂಧಿ ರವರ ಜನ್ಮ ದಿನದ ಅಂಗವಾಗಿ ಸದ್ಭಾವನಾ ದಿನಾಚರಣೆ ಹಾಗೂ ದಿ॥ ಶ್ರೀ ವಿ.ಪಿ. ದೀನದಯಾಳು ನಾಯ್ಡು ರವರ ಜನ್ಮ ಶತಮಾನೋತ್ಸವ ಕಾರ್ಯಕ್ರಮವನ್ನು ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ ಆವರಣದಲ್ಲಿ ಆಚರಿಸಲಾಯಿತು. ಈ ಸಭೆಯಲ್ಲಿ ಜಿಲ್ಲಾ ಆಯುಕ್ತರು (ಸ್ಕೌಟ್) ಆದ ಶ್ರೀ ಪಿ.ಎಲ್. ಸುರೇಶ್ ರಾಜ್ ರವರು ಭಾಗವಹಿಸಿದ್ದರು. ಗೈಡ್ಸ್ ಆಯುಕ್ತರಾದ ಶ್ರೀಮತಿ ಜಯಶೀಲಾ ಮಹೇಶ್ವರಪ್ಪ, ಎ.ಡಿ.ಸಿ., ಶ್ರೀ ಅನ್ವರ್ ಭಾಷಾ ಜಿಲ್ಲಾ ಖಜಾಂಚಿ, ಶ್ರೀ ವೈಭಿ ಮಹೇಂದ್ರನಾಥ್ ಸಹ ಕಾರ್ಯದರ್ಶಿ, ಶ್ರೀ ಸತ್ಯ ನಾರಾಯಣನಾಯ್ಡು ಆಜೀವ ಸದಸ್ಯರು, ಶ್ರೀಮತಿ ಪದ್ಮಾವತಿ ಗೈಡ್ ಕ್ಯಾಪ್ಟನ್, ದಿ॥ ರಾಜೀವ ಗಾಂಧಿರವರ ಹಾಗೂ ದಿ॥ ವಿ.ಪಿ. ದೀನದಯಾಳು ನಾಯ್ಡುರ ಬಗ್ಗೆ ಪ್ರಾಸ್ತಾವಿಕ ಮಾತನಾಡಿದರು. ಶ್ರೀಮತಿ ಶಶಿಕಲಾ ರವಿಶಂಕರ್ ರವರು ಸ್ಕೌಟ್ಸ್-ಗೈಡ್ಸ್‌ಗಳಿಂದ ಆಗುವ ಅನುಕೂಲ ಪ್ರಯೋಜನಗಳನ್ನು ಉಪಯೋಗಿಸಿಕೊಳ್ಳುವುದರ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದರು. ಶ್ರೀ ಪಿ.ಎಲ್. ಸುರೇಶ್ ರಾಜುರವರು ಅಧ್ಯಕ್ಷರ ನುಡಿಯನ್ನು ನುಡಿದರು. ಶ್ರೀಮತಿ ನಾಗಲತಾ ರವರು ನಿರೂಪಿಸಿದರು. ಶ್ರೀಮತಿ ರೀನಾ ವೀರಭದ್ರಪ್ಪರವರು ಸ್ವಾಗತ ಕೋರಿದರು. ಶ್ರೀಮತಿ ನಿರ್ಮಲಾ ಬಸವರಾಜ್ ರವರು ವಂದಿಸಿದರು. 15 ಸ್ಕೌಟ್ಸ್-ಗೈಡ್ಸ್ ಶಿಕ್ಷಕರು ಮತ್ತು 199 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 27-08-2016 ರಂದು ಜಿಲ್ಲಾ ಸಂಸ್ಥೆಯ ಕಛೇರಿ ಆವರಣದಲ್ಲಿ ಪ್ರವೇಶ, ಪ್ರಥಮ ಮತ್ತು ದ್ವಿತೀಯ ಸೋಪಾನ್ ವಿಷಯಗಳ ಕುರಿತ ರಸಪ್ರಶ್ನೆ ಸ್ಪರ್ಧೆಯನ್ನು ಚಿತ್ರದುರ್ಗ ಸ್ಥಳೀಯ ಸಂಸ್ಥೆಯ ವತಿಯಿಂದ



ಆಯೋಜಿಸಲಾಗಿತ್ತು. ಸಮಾರಂಭದ ಉದ್ಘಾಟನೆಯನ್ನು ಆದಾಯ ತೆರಿಗೆ ನಿರೀಕ್ಷಕರಾದ ಶ್ರೀ ಎನ್.ಪಿ. ಕುಮಾರಸ್ವಾಮಿಯವರು ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜಿನ ಉಪ ಪ್ರಾಂಶುಪಾಲರಾದ ಶ್ರೀ ಹೆಚ್. ರಾಜಣ್ಣ, ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಲಕ್ಷ್ಮಣ್ ಜಾದವ್, ಶಿಕ್ಷಣ ಇಲಾಖೆಯ, ಕ್ಷೇತ್ರ ಸಮನ್ವಯ ಅಧಿಕಾರಿಗಳಾದ ಶ್ರೀ ಟಿ. ಈಶ್ವರಪ್ಪ, ಡಿಜಿಟಲ್ ವರ್ಲ್ಡ್ ಮಾಲೀಕರಾದ ಶ್ರೀ ದಾದಾಪೀರ್, ಹಾಗು ಜಿಲ್ಲಾ ಖಜಾಂಚಿಗಳಾದ ಶ್ರೀ ಅನ್ವರ್ ಪಾಷಾರವರು ಪಾಲ್ಗೊಂಡಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಚಿತ್ರದುರ್ಗ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಡಿ. ಬೋರಪ್ಪನವರು ವಹಿಸಿದ್ದರು.

ಈ ಸ್ಪರ್ಧೆಗೆ ವಿವಿಧ 16 ಶಾಲೆಗಳಿಂದ 120 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಆಗಮಿಸಿದ್ದರು. ಪ್ರಥಮ ಸ್ಥಾನವನ್ನು ಎಸ್.ಜೆ.ಎಂ. ಪ್ರೌಢಶಾಲೆಯ ಗೈಡ್ಸ್‌ಗಳು ದ್ವಿತೀಯ ಸ್ಥಾನವನ್ನು ಶ್ರೀಗುರು ಸಿದ್ಧರಾಮೇಶ್ವರ ಪ್ರೌಢಶಾಲೆಯ ಸ್ಕೌಟ್ಸ್‌ಗಳು ಹಾಗೂ ತೃತೀಯ ಸ್ಥಾನವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಐ.ಯು.ಡಿ.ಪಿ. ಬಡಾವಣೆ, ಚಿತ್ರದುರ್ಗದವರು ಗಳಿಸಿದರು.

ಪ್ರಥಮ ಸ್ಥಾನ ಗಳಿಸಿದ ತಂಡಕ್ಕೆ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಡಿ. ಬೋರಪ್ಪನವರು ರೂ. 501/- ನಗದು, ಪ್ರಮಾಣಪತ್ರ, ಮತ್ತು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಇತಿಹಾಸದ ಪುಸ್ತಕ ನೀಡಿದರು. ದ್ವಿತೀಯ ಮತ್ತು ತೃತೀಯ ತಂಡಗಳಿಗೂ ಪ್ರಮಾಣಪತ್ರ ಮತ್ತು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಇತಿಹಾಸ ಪುಸ್ತಕ ನೀಡಿ ಗೌರವಿಸಿದರು. ಪುಸ್ತಕಗಳನ್ನು ಸ್ಥಳೀಯ ಸಂಸ್ಥೆಯ ಸಹಾಯಕ ಆಯುಕ್ತರಾದ ಶ್ರೀ ಡಾ. ರೆಹಮತ್ ಉಲ್ಲಾ ಮತ್ತು ಶ್ರೀ ಉಸ್ಮಾನ್ ಇವರುಗಳು ಕೊಡುಗೆಯಾಗಿ ನೀಡಿದರು.

## ದಾವಣಗೆರೆ



* ದಿನಾಂಕ 28-07-2016 ರಿಂದ 29-07-2016 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ಹೊನ್ನಾಳಿ ವತಿಯಿಂದ ತಾಲ್ಲೂಕು ಮಟ್ಟದ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಪದಕ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ಶಿಬಿರದ ಉಸ್ತುವಾರಿಯನ್ನು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಹೆಚ್. ಆಂಜನೇಯ ವಹಿಸಿದ್ದರು. ಈ ಶಿಬಿರದಲ್ಲಿ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಒಟ್ಟು 188 ಮಕ್ಕಳು 15 ಸ್ಕೌಟರ್ಸ್-ಗೈಡ್ಸ್‌ಗಳೊಂದಿಗೆ ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆ ವತಿಯಿಂದ ಶ್ರೀ ಎನ್.ಡಿ. ತಮ್ಮಣ್ಣನವರ್ ಜಿಲ್ಲಾ ಸಂಘಟಕರು ಶಿಬಿರದ ಸಹನಾಯಕರಾಗಿ ಕಾರ್ಯನಿರ್ವಹಿಸಿದರು.

* ದಿನಾಂಕ 17-08-2016 ರಿಂದ 20-08-2016 ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರದಲ್ಲಿ ದಾವಣಗೆರೆ ಜಿಲ್ಲೆಯ ರೋವರ್ಸ್-ರೇಂಜರ್ಸ್ ಪದಕ ತರಬೇತಿ ಶಿಬಿರ ಮತ್ತು ನಿಪುಣ್ ರೋವರ್, ನಿಪುಣ್ ರೇಂಜರ್ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು. ದಾವಣಗೆರೆ ಜಿಲ್ಲೆಯ ವಿವಿಧ ಕಾಲೇಜುಗಳ 80 ರೋವರ್ಸ್-

ರೇಂಜರ್ಸ್‌ಗಳು ಪದಕ ತರಬೇತಿ ಶಿಬಿರದಲ್ಲಿ ಹಾಗೂ 130 ರೋವರ್ಸ್-ರೇಂಜರ್ಸ್‌ಗಳು ನಿಪುಣ್ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಿದ್ದರು. ಪದಕ ತರಬೇತಿ ಶಿಬಿರದ ರೋವರ್ಸ್ ವಿಭಾಗದ ನಾಯಕರಾಗಿ ಶ್ರೀ ಟಿ.ಎಸ್. ಶಿವಣ್ಣ, ಜಿಲ್ಲಾ ಸಂಘಟಕರು ಕಾರ್ಯನಿರ್ವಹಿಸಿದ್ದರು. ರೇಂಜರ್ಸ್ ವಿಭಾಗದ ನಾಯಕರಾಗಿ ಕುಮಾರಿ ಪ್ರಿಯಾಂಕ ಹೆಚ್.ಎಂ., ಜಿಲ್ಲಾ ಸಂಘಟಕರು, ಕಾರ್ಯನಿರ್ವಹಿಸಿದರು. ನಿಪುಣ್ ರೋವರ್ ಪರೀಕ್ಷಾ ಶಿಬಿರದ ನಾಯಕರಾಗಿ ಶ್ರೀ ಎನ್.ಡಿ. ತಮ್ಮಣ್ಣನವರ್, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್ಸ್) ಮತ್ತು ನಿಪುಣ್ ರೇಂಜರ್ ಪರೀಕ್ಷಾ ಶಿಬಿರದ ನಾಯಕರಾಗಿ ಡಾ॥ ಶಕುಂತಲಾ, ರೇಂಜರ್ ಲೀಡರ್ ಕಾರ್ಯ ನಿರ್ವಹಿಸಿದರು.



ದಿನಾಂಕ 20-08-2016 ರಂದು ದಿ॥ ರಾಜೀವ್ ಗಾಂಧಿಯವರ 72ನೇ ಜಯಂತಿ ಪ್ರಯುಕ್ತ ಸದ್ಭಾವನಾ ದಿನಾಚರಣೆಯನ್ನು ಕೊಂಡಜ್ಜಿ ಗ್ರಾಮದಲ್ಲಿ ಆಚರಿಸಲಾಯಿತು. ಸರ್ವಧರ್ಮ ಪ್ರಾರ್ಥನೆಯೊಂದಿಗೆ ಪ್ರಾರಂಭಿಸಿ ಗ್ರಾಮದಲ್ಲಿ ರೋವರ್ಸ್-ರೇಂಜರ್ಸ್‌ಗಳಿಂದ ಪಥಸಂಚಲನೆ ನಡೆಸಿ ಗ್ರಾಮಸ್ಥರಲ್ಲಿ ಪರಿಸರ ಜಾಗೃತಿ ಮೂಡಿಸಲಾಯಿತು. ಸ್ವಚ್ಛ ಭಾರತ್ ಅಭಿಯಾನವನ್ನು ಗ್ರಾಮಪಂಚಾಯತಿ ಮತ್ತು ಆಸ್ಪತ್ರೆಯಲ್ಲಿ ನಡೆಸಲಾಯಿತು. ಸದ್ಭಾವನಾ ಪ್ಲೆಡ್ಜ್ ಬಗ್ಗೆ ರೋವರ್ಸ್-ರೇಂಜರ್ಸ್‌ಗಳಿಗೆ ಬೋಧಿಸಲಾಯಿತು.



* ದಿನಾಂಕ 21-08-2016 ರಂದು ದಿ॥ ಮಾಜಿ ಪ್ರಧಾನಮಂತ್ರಿಯಾದ ರಾಜೀವ್ ಗಾಂಧಿಯವರ 72ನೇ ಜಯಂತಿ ಪ್ರಯುಕ್ತ ಪರಿಸರ ಜಾಗೃತಿ ಕಾರ್ಯಕ್ರಮವನ್ನು ಪಿ.ಜೆ. ಬಡಾವಣೆ ರಾಮ್ ಅಂಡ್ ಕೋ ಸರ್ಕಲ್‌ನಲ್ಲಿ ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ದಾವಣಗೆರೆಯ ಮಹಾನಗರ ಪಾಲಿಕೆಯ ಮೇಯರ್, ಶ್ರೀಮತಿ ಅಶ್ವಿನಿ ಪ್ರಶಾಂತ್, ಉಪಮೇಯರ್ ಶ್ರೀ ಜಿ. ರಾಜಶೇಖರ್, ಸದಸ್ಯರಾದ ಶ್ರೀ ದಿನೇಶ್, ಕೆ. ಶೆಟ್ಟಿ ವಿನೋಬನಗರ ಸದಸ್ಯರಾದ ಶ್ರೀನಾಗರಾಜ್, ಮಹಾನಗರ ಪಾಲಿಕೆಯ ಕಾರ್ಮಿಕರ ಸಂಘದ ಅಧ್ಯಕ್ಷರಾದ ಶ್ರೀ ಗೋವಿಂದರಾಜ್, ಅನಮೋಲ್ ವಿದ್ಯಾಸಂಸ್ಥೆಯ ಅಧ್ಯಕ್ಷರಾದ ಶ್ರೀ ಎ.ಪಿ. ಷಡಕ್ಷರಪ್ಪ ಉಪಸ್ಥಿತರಿದ್ದರು. ಸಂತ ಪಾಲರ ಬಾಲಕಿಯರ ಶಾಲೆ, ಶ್ರೀ ತರಳಬಾಳು ಜಗದ್ಗುರು ರೆಸಿಡೆನ್ಸಿಯಲ್ ಶಾಲೆ, ಅನ್‌ಮೋಲ್ ವಿದ್ಯಾ ಸಂಸ್ಥೆ, ಲೂರ್ಡ್ಸ್ ಬಾಲಕರ ಶಾಲೆಯ ಮಕ್ಕಳು ಭಾಗವಹಿಸಿದ್ದರು. ಶಾಲೆಯ ಸ್ಕೌಟ್-ಗೈಡ್‌ಗಳು ಸಾರ್ವಜನಿಕರಿಗೆ ಸಸಿಗಳನ್ನು ವಿತರಿಸಿ ಪರಿಸರದ ಬಗ್ಗೆ ಜಾಗೃತಿ ಮೂಡಿಸಿದರು.

ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ 625ಕ್ಕೆ 621 ಅಂಕಗಳನ್ನು ಗಳಿಸಿ ರಾಜ್ಯಕ್ಕೆ 5ನೇ ಸ್ಥಾನ ಹಾಗೂ ಜಿಲ್ಲೆಗೆ ಮೊದಲನೇ ಸ್ಥಾನ ಪಡೆದ ಕು॥ ಸುನೀಧಿ ಎಂ. ಘಟೀಕರ್ ರವನ್ನು ಸನ್ಮಾನಿಸಲಾಯಿತು.

* ದಿನಾಂಕ 26-08-2016 ರಂದು ದಾವಣಗೆರೆ ಜಿಲ್ಲೆಗೆ ನೂತನವಾಗಿ ಆಗಮಿಸಿರುವ ಜಿಲ್ಲಾಧಿಕಾರಿಗಳಾದ ಶ್ರೀ ಡಿ.ಎಸ್. ರಮೇಶ್ ಭಾ.ಆ.ಸೇ, ಪೋಷಕರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ದಾವಣಗೆರೆ ಇವರನ್ನು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭೇಟಿಮಾಡಿ ಸ್ವಾಗತಿಸಿದರು. ಅವರೊಂದಿಗೆ ಜಿಲ್ಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ಕಾರ್ಯಚಟುವಟಿಕೆಗಳ ಬಗ್ಗೆ ಸಮಾಲೋಚನೆ ನಡೆಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆ ಅಧ್ಯಕ್ಷರಾದ ಶ್ರೀ ಮೊಹಮ್ಮದ್ ವಾಸಿಲ್, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ

ಉಪಾಧ್ಯಕ್ಷರಾದ ಶ್ರೀಮತಿ ಮಂಗಳ ವಿಶ್ವನಾಥ್ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್. ಶಂಕರ್ ನಾಯ್ಕ್, ಜಿಲ್ಲಾ ಖಜಾಂಚಿಗಳಾದ ಶ್ರೀ ಬೂಸ್ನೂರು ವಿಶ್ವನಾಥ್, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಎ. ಶಿವಪ್ಪ, ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ನೂರುಲ್ಲಾ, ಜಿಲ್ಲಾ ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ಆರ್. ಸುಖವಾಣಿ, ಜಿಲ್ಲಾ ಸಂಘಟಕರಾದ ಕುಮಾರಿ ಪ್ರಿಯಾಂಕ. ಹೆಚ್.ಎಂ., ಗೈಡರ್ ಶ್ರೀಮತಿ ಮಂಜುಳ ಉಪಸ್ಥಿತರಿದ್ದರು.

* ದಿನಾಂಕ 18-06-2016 ರಂದು ವಿಶ್ವ ಯೋಗ ದಿನಾಚರಣೆ ಅಂಗವಾಗಿ ಯೋಗ ನಡಿಗೆ, ಯೋಗ ಜಾಥಾ ಕಾರ್ಯಕ್ರಮವನ್ನು ಜಿಲ್ಲಾಡಳಿತ ಮತ್ತು ಆಯುಷ್ ಇಲಾಖೆ ವತಿಯಿಂದ ಆಯೋಜಿಸಲಾಗಿತ್ತು. ಸದರಿ ಕಾರ್ಯಕ್ರಮದಲ್ಲಿ ವಿವಿಧ ಶಾಲೆಗಳ ಸುಮಾರು 200 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದರು. ಶ್ರೀ ಎ.ಪಿ. ಷಡಾಕ್ಷರಪ್ಪ ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಎಸ್. ಶಂಕರ್ ನಾಯ್ಕ್ ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಟಿ.ಎಸ್. ಶಿವಣ್ಣ ಜಿಲ್ಲಾ ಸಂಘಟಕರು (ಸ್ಕೌಟ್ಸ್), ಕುಮಾರಿ ಪ್ರಿಯಾಂಕ ಜಿಲ್ಲಾ ಸಂಘಟಕರು (ಗೈಡ್ಸ್) ಇವರು ಉಪಸ್ಥಿತರಿದ್ದರು.

* ದಿನಾಂಕ 21-06-2016 ರಂದು ಮೋತಿ ವೀರಪ್ಪ ಪದವಿ ಪೂರ್ವ ಕಾಲೇಜು ಆವರಣದಲ್ಲಿ ಜಿಲ್ಲಾಡಳಿತದ ವತಿಯಿಂದ ಆಯೋಜಿಸಿದ್ದ ಅಂತರಾಷ್ಟ್ರೀಯ ಯೋಗ ದಿನಾಚರಣೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಟಿ.ಎಸ್. ಶಿವಣ್ಣ, ಜಿಲ್ಲಾ ಸಂಘಟಕರು (ಸ್ಕೌಟ್ಸ್), ಕುಮಾರಿ ಪ್ರಿಯಾಂಕ ಜಿಲ್ಲಾ ಸಂಘಟಕರು (ಗೈಡ್ಸ್) ಇವರುಗಳು ಭಾಗವಹಿಸಿದ್ದರು. ವಿವಿಧ ಶಾಲೆಯ ಸುಮಾರು 250ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಯೋಗಾಭ್ಯಾಸದಲ್ಲಿ ಪಾಲ್ಗೊಂಡಿದ್ದರು.

* ದಿನಾಂಕ 26-06-2016 ರಂದು ಬಾಪೂಜಿ ಓಪನ್ ಸ್ಕೌಟ್ ಟ್ರೂಪ್ ಮತ್ತು ಮದರ್ ತೆರೆಸಾ ಓಪನ್ ಗೈಡ್ ಕಂಪನಿ ವತಿಯಿಂದ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು. 150 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಚಿತ್ರಕಲಾ ಸ್ಪರ್ಧೆಯನ್ನು ಆಯೋಜಿಸಲಾಗಿತ್ತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿಯವರು ಉಪಸ್ಥಿತರಿದ್ದರು. ಶ್ರೀ ರವೀಂದ್ರ ಸ್ವಾಮಿ ಟಿ.ಎಂ. ಸ್ಕೌಟ್ ಮಾಸ್ಟರ್, ಶ್ರೀಮತಿ ನಯನಾ ಏಸುಪ್ರಿಯ, ಗೈಡ್ ಕ್ಯಾಪ್ಟನ್, ಕುಮಾರಿ ರಜನಿ ಹೆಚ್.ಎಂ. ಕುಮಾರಿ ರಮ್ಯ, ಹೆಚ್.ಎಂ. ಶ್ರೀ ರಾಘವೇಂದ್ರ ಸ್ಕೌಟ್ ಮಾಸ್ಟರ್ ಹಾಜರಿದ್ದರು.

ಶ್ರೀ ವಾಮದೇವಪ್ಪ ಮತ್ತು ಶ್ರೀ ಡಿ.ಟಿ. ನಾಗರಾಜ್ ಹೆಚ್.ಡಬ್ಲ್ಯೂ.ಬಿ. (ಸ್ಕೌಟ್) ಇವರು ದೈವಾಧೀನರಾಗಿದ್ದು, ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಪ್ರಾರ್ಥಿಸಿದರು.

* ದಿನಾಂಕ 26-06-2016 ರಂದು ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಶ್ರೀ ಎಸ್.ಎಸ್. ಮಲ್ಲಿಕಾರ್ಜುನ ಸರೋವರ ಕುಂದುವಾಡದ ಕೆರೆಯಲ್ಲಿ ಪರಿಸರದ ಬಗ್ಗೆ ಚಿತ್ರಕಲಾ ಸ್ಪರ್ಧೆಯನ್ನು ಹಮ್ಮಿಕೊಳ್ಳಲಾಗಿತ್ತು. ಇದರಲ್ಲಿ 250 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಭಾಗವಹಿಸಿದ್ದರು. ಕುಂದುವಾಡ ಕೆರೆಯ ಆವರಣದಲ್ಲಿನ ಪರಿಸರದ ಬಗ್ಗೆ ಸ್ಕೌಟ್-ಗೈಡ್‌ಗಳಿಗೆ ಮಾಹಿತಿ ನೀಡಿ, ಸ್ವಚ್ಛತೆಯ ಬಗ್ಗೆ ಅರಿವು ಮೂಡಿಸಲಾಯಿತು.

ಮುಖ್ಯ ಅತಿಥಿಗಳಾಗಿ ಕುಂದುವಾಡದ ಕಾರ್ಪೋರೇಟರ್ ಶ್ರೀ ತಿಪ್ಪೇಸ್ವಾಮಿ, ಉಪಮೇಯರ್ ಶ್ರೀ ರಮೇಶ್. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರಿ ಮುರುಘರಾಜೇಂದ್ರ ಜೆ. ಚಿಗಟೇರಿ, ಅನ್‌ಮೋಲ್ ಪಬ್ಲಿಕ್ ಶಾಲೆಯ ನಿರ್ದೇಶಕರಾದ ಶ್ರೀ ರವಿಕುಮಾರ್ ಹಾಗು ಮಹಾನಗರ ಪಾಲಿಕೆ ಪೌರ ಕಾರ್ಮಿಕರ ಸಂಘದ ಅಧ್ಯಕ್ಷರಾದ ಶ್ರೀ ಗೋವಿಂದ ರಾಜು ಇವರುಗಳು ಉಪಸ್ಥಿತರಿದ್ದರು.

ಬಾಪೂಜಿ ಓಪನ್ ಸ್ಕೌಟ್ ಟ್ರೂಪ್‌ನ ನಾಯಕರಾದ ಶ್ರೀ ರವೀಂದ್ರ ಸ್ವಾಮಿ ಟಿ.ಎಂ. ಹಾಗೂ ಸೇಂಟ್ ಪಾಲ್ಸ್ ಕಾನ್ವೆಂಟ್‌ನ ಗೈಡ್ ಕ್ಯಾಪ್ಟನ್‌ಗಳಾದ ಶ್ರೀಮತಿ ನಯನ ಏಸುಪ್ರಿಯ, ಕುಮಾರಿ ರಜನಿ ಹೆಚ್.ಎಂ. ಮತ್ತು ಕುಮಾರಿ ರಮ್ಯ, ಹೆಚ್.ಎಂ. ಅನ್‌ಮೋಲ್ ಪಬ್ಲಿಕ್ ಶಾಲೆಯ ಶ್ರೀ ರಾಘವೇಂದ್ರ ಹಾಜರಿದ್ದರು.

## ಧಾರವಾಡ



ದಿನಾಂಕ 20-08-2016 ರಂದು ಜಿಲ್ಲಾ ಸಂಸ್ಥೆಯ ಆವರಣದಲ್ಲಿ ನಡೆದ ಸ್ಕೌಟ್ಸ್-ಗೈಡ್ಸ್‌ಗಳ ಮೇಳದಲ್ಲಿ ರಾಜೀವ ಗಾಂಧಿಯವರ 72ನೇ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಇದರ ಅಂಗವಾಗಿ ಪ್ರಬಂಧ ಸ್ಪರ್ಧೆ, ಚಿತ್ರಕಲೆ ಹಾಗೂ ಸದ್ಭಾವನಾ ಪ್ರಾರ್ಥನೆ ಹಮ್ಮಿಕೊಳ್ಳಲಾಗಿತ್ತು. .

ನಗರದ ಪ್ರತಿಷ್ಠಿತ ಶೈಕ್ಷಣಿಕ ಸಂಸ್ಥೆಯಾದ ಮರಾಠಾ ವಿದ್ಯಾಪ್ರಸಾರಕ ಮಂಡಳದ ಅಧ್ಯಕ್ಷರಾದ ಸನ್ಮಾನ್ಯಶ್ರೀ ಮಂಜುನಾಥ, ಎಸ್. ಕದಂ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ರಾಜೀವ ಗಾಂಧಿಯವರ ಮಹಾನ್ ವ್ಯಕ್ತಿತ್ವದ ಬಗೆಗೆ ಸ್ಕೌಟ್-ಗೈಡ್‌ಗಳಿಗೆ ತಿಳಿಸಿದರು ಹಾಗೂ ಜಿಲ್ಲಾ ಸಂಸ್ಥೆಯ ಕಾರ್ಯಕ್ರಮಗಳ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಪ್ರಭಾ ಲೋಂಡೆ ಸಹಕಾರ್ಯದರ್ಶಿ ಶ್ರೀ ಎ.ವ್ಹಿ. ಶಿಂಧೆ ಹಾಗು ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್‌ರು ಉಪಸ್ಥಿತರಿದ್ದರು.

## ಗದಗ

* ದಿನಾಂಕ 22-08-2016 ರಂದು ದಿ॥ ದೀನದಯಾಳುನಾಯ್ದು ಶತಮಾನೋತ್ಸವ ಹಾಗು ಭಾರತದ ಮಾಜಿ ಪ್ರಧಾನಿ ದಿ॥ ರಾಜೀವ್ ಗಾಂಧಿಯವರ ಜನ್ಮದಿನದ ಅಂಗವಾಗಿ ಜಗದ್ಗುರು ತೋಂಟದಾರ್ಯ ಪದವಿ ಪೂರ್ವ ಕಾಲೇಜಿನ ರೋವರ್ಸ್‌ಗಳಿಂದ ಸದ್ಭಾವನಾ ದಿನಾಚರಣೆ ಆಚರಿಸಲಾಯಿತು. ಹಾಗೂ ಪ್ರತಿಜ್ಞಾ ವಿಧಿಯನ್ನು ಭೋದಿಸಲಾಯಿತು. ಅತಿಥಿಗಳಾಗಿ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರು ಶ್ರೀ ಎಂ.ಎಂ. ನರಗುಂದ, ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ., ಭಾಗವಹಿಸಿದ್ದರು ಹಾಗು ಶ್ರೀ ಸಿ.ಆರ್. ನಾಗಭೂಷಣ ರೋವರ್-ಸ್ಕೌಟ್ ಲೀಡರ್ ನೇತೃತ್ವ ವಹಿಸಿದ್ದರು.



* ದಿನಾಂಕ 27-08-2016 ರಂದು ಬಾಲ ವಿನಾಯಕ ವಿದ್ಯಾನಿಕೇತನ ಆಂಗ್ಲ ಮಾಧ್ಯಮಶಾಲೆಯ ಮಕ್ಕಳಿಂದ ಒಂದು ದಿನದ ಹೈಕಿಂಗ್ ಶಿಬಿರವನ್ನು ನಡೆಸಲಾಯಿತು. ಚಾಲನೆಯನ್ನು ಶ್ರೀ ರಾಮಲಿಂಗಂ ಕಾರ್ಯಕಾರಿಣಿ ಮಂಡಳಿಯ ಸದಸ್ಯರು ನೀಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ಶಿವುಕುಮಾರ, ಶಾಲೆಯ ಮುಖ್ಯ ಗುರುಗಳು ಭಾಗವಹಿಸಿದ್ದರು. ಸ್ಕೌಟ್-ಗೈಡ್‌ಗಳು ಶಾಲೆಯಿಂದ 10 ಕಿ.ಮೀ. ವರೆಗೆ ಕಾಲ್ನಡಿಗೆಯಲ್ಲಿ ಪ್ರಯಾಣಿಸಿ, ಲಕ್ಕುಂಡಿಯನ್ನು ತಲುಪಿ ಅಲ್ಲಿ ಶ್ರಮದಾನವನ್ನು ಮಾಡಿ ಊರ ಜನರ ಮೆಚ್ಚುಗೆಗೆ ಪಾತ್ರರಾದರು. ಶ್ರೀ ಖಾಜಾವಾಲಿ ಮುಲ್ಲಾ, ಸ್ಕೌಟ್ ಮಾಸ್ಟರ್, ಶ್ರೀಮತಿ ಕವಿತಾ ಕುಂಠೆ, ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಹಾಗು ಶ್ರೀ ಎ.ಎಸ್. ಶಿವುಕುಮಾರ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಭಾಗವಹಿಸಿದ್ದರು.

* ದಿನಾಂಕ 31-08-2016 ರಂದು ರೈಲ್ವೆ ಆಂಗ್ಲ ಮಾಧ್ಯಮ ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಒಂದು ದಿನದ ಶಿಬಿರವನ್ನು ನಡೆಸಲಾಯಿತು. ಅಧ್ಯಕ್ಷತೆಯನ್ನು ಶಾಲೆಯ ಮುಖ್ಯಗುರುಗಳಾದ ಶ್ರೀ ಮಯೂರನಾಥ ವಹಿಸಿದ್ದರು. ಬಿ.ಪಿ.ರವರ 6 ವ್ಯಾಯಾಮ ಮಾಡುವುದರಿಂದ ಮಕ್ಕಳಿಗೆ ಲವಲವಿಕೆ ಉತ್ಸಾಹ ಮೂಡುತ್ತದೆ ಎಂದು ತಿಳಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ಉಮೇಶ್ ನೇತೃತ್ವ ವಹಿಸಿದ್ದರು. ಶಾಲೆಯ ಸಿಬ್ಬಂದಿವರ್ಗ ಭಾಗವಹಿಸಿದ್ದರು. .

## ಹಾವೇರಿ

ಹಾನಗಲ್ ತಾಲೂಕ ಮಟ್ಟದ ದ್ವಿತೀಯ ಸೋಪಾನ ಪರೀಕ್ಷೆ ಹಾಗು ಸ್ವಚ್ಛತಾ ಕಾರ್ಯಕ್ರಮ ಸರಕಾರಿ ಪ್ರಾಥಮಿಕ ಶಾಲೆ ಗೆಜ್ಜೀಹಳ್ಳಿಯಲ್ಲಿ ನಡೆಸಲಾಯಿತು. ಶಿಬಿರದಲ್ಲಿ 80 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಗ್ರಾಮದ ಬೀದಿ ಮತ್ತು ಬೀರೇಶ್ವರ ದೇವಸ್ಥಾನ ಆವರಣದಲ್ಲಿ ಸ್ವಚ್ಛತಾ ಕಾರ್ಯ ಕೈಗೊಳ್ಳಲಾಯಿತು. ಕಾರ್ಯಕ್ರಮದಲ್ಲಿ ತಾಲೂಕ ಪಂಚಾಯತಿ ಸದಸ್ಯರು ಗ್ರಾ.ಪಂ. ಸದಸ್ಯರು, ಮುಖ್ಯೋಪಾಧ್ಯಾಯರು, ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ನರು ಶ್ರೀ ಎ.ಎಲ್. ಶೆಖಸೂರಣಗಿ ಡಿ.ಓ.ಸಿ., ಶ್ರೀಮತಿ ಶೋಬಾ ಪಾಟೀಲ್, ತಾಲೂಕ ಕಾರ್ಯದರ್ಶಿ ಭಾಗವಹಿಸಿದ್ದರು.

* ಸವಣೂರು ತಾಲೂಕ ಚಳ್ಳಾಳ ಪ್ರಾಥಮಿಕ ಶಾಲೆಯಲ್ಲಿ ದ್ವಿತೀಯ ಸೋಪಾನ ಪರೀಕ್ಷೆ ನಡೆಸಲಾಯಿತು. ತಾಲೂಕ ಮಟ್ಟದ ಕಾರ್ಯಕ್ರಮದಲ್ಲಿ 50 ಸ್ಕೌಟ್ಸ್, 40 ಗೈಡ್ಸ್‌ಗಳು ಭಾಗವಹಿಸಿದ್ದರು. ತಾಲೂಕಿನ ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು. ತಾಲೂಕ ಸಂಸ್ಥೆಯ ಪದಾಧಿಕಾರಿಗಳು ಕಾರ್ಯದರ್ಶಿಯವರು ಕಾರ್ಯಕ್ರಮ ಸಂಘಟಿಸಿದ್ದರು.

## ಹಾಸನ

ದಿನಾಂಕ: 20-08-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಸ್ಕೌಟ್-ಗೈಡ್ ಭವನದಲ್ಲಿ ಸದ್ಭಾವನಾ ದಿನವನ್ನು ಆಚರಿಸಲಾಯಿತು. ಬೆಳಗ್ಗೆ 7 ಗಂಟೆಗೆ ಸರ್ವಧರ್ಮ ಪ್ರಾರ್ಥನೆಯನ್ನು ವ್ಯವಸ್ಥೆಗೊಳಿಸಲಾಗಿತ್ತು. ಹಾಸನ ನಗರದ ವೆಂಕಟೇಶ್ವರ ಪ್ರೌಢಶಾಲೆ, ಬಸವರಾಜೇಂದ್ರ ಪ್ರೌಢಶಾಲೆ, ಸಂತ ಫಿಲೋಮಿನ ಪ್ರೌಢಶಾಲೆ, ಸಿ.ಕೆ.ಎಸ್. ಪ್ರೌಢಶಾಲೆಗಳಿಂದ ಆಗಮಿಸಿದ್ದರ ಸ್ಕೌಟ್-ಗೈಡ್‌ಗಳಿಂದ ದೇಶಭಕ್ತಿ ಗೀತೆಗಳನ್ನು ಹಾಡಿಸಲಾಯಿತು.

ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಶಿವಣ್ಣನವರು ಮಾತನಾಡಿ ಮಾನವೀಯ ಮೌಲ್ಯಗಳನ್ನು ರೂಢಿಸಿಕೊಂಡು ಮಾದರಿ ಪ್ರಜೆಗಳಾಗಿ ಬಾಳಬೇಕೆಂದು ಸ್ಕೌಟ್-ಗೈಡ್‌ಗಳಿಗೆ ಕಿವಿಮಾತು ಹೇಳಿದರು. ಈ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ ಕಮೀಷನರ್ ಶ್ರೀ ಪ್ರಕಾಶ್ ಎಸ್. ಯಾಜಿ ಮತ್ತು ಜಿಲ್ಲಾ ಗೈಡ್ ಕಮೀಷನರ್ ಶ್ರೀಮತಿ ಜಯಾರಮೇಶ್ ಮಾತನಾಡಿ ಸದ್ಭಾವನಾ ದಿನಾಚರಣೆಯ ಮಹತ್ವದ ಬಗ್ಗೆ ತಿಳಿಸಿದರು.

## ಕಲಬುರಗಿ

ದಿನಾಂಕ : 19-08-2016 ರಂದು ಚಿತ್ತಾಪೂರ ತಾಲ್ಲೂಕಿನ ಸ್ಕೌಟರ್-ಗೈಡರ್ ಸಮಾವೇಶವನ್ನು ಸರಕಾರಿ ಪ್ರೌಢಶಾಲೆ ಮಾಡಬಾಳದಲ್ಲಿ ಏರ್ಪಡಿಸಲಾಗಿದ್ದು, ಈ ಸಭೆಯ ಅಧ್ಯಕ್ಷತೆಯನ್ನು ಮುಖ್ಯ ಗುರುಗಳಾದ ಶ್ರೀಮತಿ ಸಿದ್ಧಮ್ಮಾ ಅವರು ವಹಿಸಿದ್ದರು. ಶ್ರೀ ಜಯಪ್ರಕಾಶ ಕಟ್ಟಿಮನಿ ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಚಿತ್ತಾಪೂರ ಅತಿಥಿಗಳಾಗಿದ್ದರು. ಪ್ರಾರ್ಥನೆಯೊಂದಿಗೆ ಪ್ರಾರಂಭವಾದ ಸಭೆಯಲ್ಲಿ ಶ್ರೀ ಗುರುನಾಥ ಕಾಳೆ ಸ್ವಾಗತ ಕೋರಿದರು. ಶ್ರೀ ವೀರಭದ್ರಯ್ಯ ವೈ. ಡಿ.ಓ.ಸಿ.ಯವರು ಸ್ಕೌಟಿಂಗ್-ಗೈಡಿಂಗ್ ಉದ್ದೇಶ, ಸಾಧಕ-ಭಾದಕಗಳ ಬಗ್ಗೆ, 'ಕರ್ನಾಟಕ ದರ್ಶನ' ಪ್ರವಾಸದ ಬಗ್ಗೆ ಹಾಗು 17ನೆಯ ರಾಷ್ಟ್ರೀಯ ಜಾಂಬೂರಿ ಬಗ್ಗೆ ತಿಳಿಸಿದರು.

ಅಧ್ಯಕ್ಷತೆ ವಹಿಸಿ ಮಾತನಾಡುತ್ತ ಶ್ರೀಮತಿ ಸಿದ್ಧಮ್ಮಾ ಅವರು ಸ್ವಚ್ಛ ಭಾರತ ಅಭಿಯಾನ ಕಾರ್ಯಕ್ರಮದಡಿಯಲ್ಲಿ ಗಿಡ-ಮರಗಳನ್ನು ನಮ್ಮ ನಮ್ಮ ಶಾಲೆಯ ಆವರಣದಲ್ಲಿ ಒಂದು ಮರವನ್ನು ಕಡ್ಡಾಯವಾಗಿ ನೆಡಲು ಸಲಹೆ ನೀಡಿದರು. ಶ್ರೀ ಜಯಪ್ರಕಾಶ್ ವಂದನಾರ್ಪಣೆ ಮಾಡಿದರು.

* ದಿನಾಂಕ 23-08-2016 ರಂದು ಕಲಬುರಗಿ (ಉತ್ತರ-ದಕ್ಷಿಣ) ವಲಯಗಳ ಸ್ಕೌಟರ್-ಗೈಡರ್ ಸಮಾವೇಶವನ್ನು ಸರಕಾರಿ ಪ್ರೌಢಶಾಲೆ (ಎಂ.ಪಿ.ಹೆಚ್.ಎಸ್.) ಸುಪರ ಮಾರ್ಕೆಟ ಕಲಬುರಗಿಯಲ್ಲಿ ಕರೆಯಲಾಗಿತ್ತು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಯಾದ ಶ್ರೀ ಪೀರಪ್ಪ ಎಚ್. ಪ್ರಾಸ್ತಾವಿಕವಾಗಿ ಮಾತನಾಡುತ್ತ ಎಲ್ಲರು ಸ್ಕೌಟಿಂಗ್-ಗೈಡಿಂಗ್ ಅಭಿವೃದ್ಧಿ ಪಡಿಸಲು ತಮ್ಮ ದಳಗಳನ್ನು ಸರಿಯಾಗಿ ಮುನ್ನಡೆಸಬೇಕು ಎಂದರು. ಅಧ್ಯಕ್ಷತೆ ವಹಿಸಿ ಮಾತನಾಡಿದ ಶ್ರೀ ಎಸ್.ಪಿ. ಸುಳ್ಳದ್, ಆಯುಕ್ತರು (ಸ್ಕೌ) ಜಿಲ್ಲೆ ರಾಜ್ಯ-ರಾಷ್ಟ್ರಮಟ್ಟದ ಕಾರ್ಯಕ್ರಮಗಳು ನಿರಂತರವಾಗಿ ಏರ್ಪಡಿಸುತ್ತಾರೆ. ನಮ್ಮ ಜಿಲ್ಲೆಯ ಸ್ಕೌಟರ್-ಗೈಡರ್, ಸ್ಕೌಟ್ಸ್-ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಲು ಸನ್ನದ್ಧರಾಗಿರಬೇಕು ಎಂದರು. ಶ್ರೀ ಅಮರೇಶ ಕೋರಿ ವಂದನಾರ್ಪಣೆ ಮಾಡಿದರು. ಶ್ರೀಮತಿ ಸುಮಂಗಲಾ ಕಾರ್ಯಕ್ರಮ ನಿರೂಪಿಸಿದರು.

## ಕೋಲಾರ

* ದಿನಾಂಕ 09-07-2016 ರಂದು ಸ್ಥಳೀಯ ಸಂಸ್ಥೆ ಕೋಲಾರ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ನಡೆಸಲಾಯಿತು. ಸಮಾವೇಶದ ಅಧ್ಯಕ್ಷತೆಯನ್ನು ಎ.ಡಿ.ಸಿ.ಗಳಾದ ಶ್ರೀ ಕೆ.ಆರ್. ಸುರೇಶ್ ರವರು ವಹಿಸಿದ್ದರು. ಸಂಪನ್ಮೂಲ ವ್ಯಕ್ತಿಗಳಾಗಿ ಜಿಲ್ಲಾ ಸಂಘಟಕರಾದ ಶ್ರೀ ವಿ. ಬಾಬು ಸಹ ಕಾರ್ಯದರ್ಶಿ ಶ್ರೀ ಜಿ.ಎಂ. ಶ್ರೀನಿವಾಸ, ಶ್ರೀ ಮುನಿಸ್ವಾಮಿದವರು ಕಾರ್ಯ ನಿರ್ವಹಿಸಿದರು.

* ದಿನಾಂಕ 15-07-2016 ರಿಂದ 17-07-2016 ರ ವರೆಗೆ ಶ್ರೀಕ್ಷೇತ್ರ ಆವಣಿಯಲ್ಲಿ ತೃತೀಯ ಸೋಪಾನ / ತೃತೀಯ ಚರಣ್ / ಸುವರ್ಣ ಪಂಕ್ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು. ಶಿಬಿರದ ನಾಯಕರಾಗಿ ಶ್ರೀ ನಂಜುಂಡಪ್ಪ, (ಸ್ಕೌಟ್ ವಿಭಾಗ) ಶ್ರೀಮತಿ ಎನ್. ಉಮಾದೇವಿ (ಗೈಡ್ ವಿಭಾಗ) ಶ್ರೀಮತಿ ಜರಿನಾಬೇಗಂ, (ಕಬ್ ವಿಭಾಗಕ್ಕೆ) ಶ್ರೀಮತಿ ಗೌರಬಾಯಿ (ಬುಲ್ ಬುಲ್ ವಿಭಾಗಕ್ಕೆ)ರವರು ಕಾರ್ಯನಿರ್ವಹಿಸಿದರು. ಶಿಬಿರದ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ತಾಲ್ಲೂಕು ಪಂಚಾಯತಿ ಸದಸ್ಯರಾದ ಶ್ರೀ ರವಿಶಂಕರ್ ಮತ್ತು ಗ್ರಾಮ ಪಂಚಾಯತಿಯ ಅಧ್ಯಕ್ಷರು ಹಾಗೂ ಸದಸ್ಯರು ಭಾಗವಹಿಸಿದ್ದರು. ಶಿಬಿರದ ನಿರ್ದೇಶಕರಾಗಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್, ಸಹನಾಯಕರಾಗಿ ಶ್ರೀ ಭಾಸ್ಕರ್ ರೆಡ್ಡಿ, ಶ್ರೀಮತಿ ಅಲುವೇಲಮ್ಮ ನಾರಾಯಣಸ್ವಾಮಿ, ಶ್ರೀ ವಿ. ಬಾಬುರವರುಗಳು ಸೇವೆ ಸಲ್ಲಿಸಿದರು. ಶಿಬಿರದಲ್ಲಿ 225 ಸ್ಕೌಟ್ಸ್, 130 ಗೈಡ್ಸ್, 69 ಕಬ್‌ಗಳು, 55 ಬುಲ್ ಬುಲ್‌ಗಳು ಭಾಗವಹಿಸಿದ್ದರು.

* ದಿನಾಂಕ 23-07-2016 ರಂದು ಜಿಲ್ಲಾ ಸ್ಕೌಟ್ ಭವನದ ಶಿಲಾನ್ಯಾಸ ಮತ್ತು ಜಿಲ್ಲಾ ಸ್ಕೌಟರ್ ಸಮಾವೇಶವನ್ನು ಕೋಲಾರದ ನಗರಸಭೆಯ ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಶಿಲಾನ್ಯಾಸವನ್ನು ಜಿಲ್ಲಾ ಮಂತ್ರಿಗಳು ಹಾಗೂ ಕರ್ನಾಟಕ ಸರ್ಕಾರದ ಕುಟುಂಬ ಮತ್ತು ಕಲ್ಯಾಣ ಸಚಿವರಾದ ಶ್ರೀ ಕೆ.ಆರ್. ರಮೇಶ್ ಕುಮಾರ್, ನೆರವೇರಿಸಿದರು. ವಿಧಾನ ಪರಿಷತ್ ಸದಸ್ಯರಾದ ಶ್ರೀ ಚೌಡರೆಡ್ಡಿ, ಮಾಜಿ ಸಚಿವರಾದ ಶ್ರೀ ನಾಣಯ್ಯ, ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಸಹಾಯಕ ಆಯುಕ್ತರಾದ ಶ್ರೀಮತಿ ರಾಮಲತಾ ಹಾಗೂ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.






* ದಿನಾಂಕ : 04-08-2016 ರಂದು ಕೋಲಾರ ನಗರದ ಪ್ರಥಮ ದರ್ಜೆ ಕಾಲೇಜಿನಲ್ಲಿ ರಕ್ತದಾನ ಶಿಬಿರವನ್ನು ಏರ್ಪಡಿಸಲಾಗಿತ್ತು. ಜಿಲ್ಲೆಯ ವಿವಿಧ ಸಂಘಟನೆಗಳಾದ ರೆಡ್‌ಕ್ರಾಸ್ ಸಂಸ್ಥೆ, ರೋಟರಿ ಸಂಸ್ಥೆ, ಕಾಲೇಜಿನ ರೋವರ್ ಘಟಕಗಳು ಸಂಯುಕ್ತಾಶ್ರಯದಲ್ಲಿ 108 ಯೂನಿಟ್ ರಕ್ತವನ್ನು ಸಂಗ್ರಹಿಸಿದ ಸರ್ಕಾರಿ ಆಸ್ಪತ್ರೆಗೆ ನೀಡಲಾಯಿತು.

* ದಿನಾಂಕ 05-08-2016 ರಿಂದ 07-08-2016 ರ ವರೆಗೆ ಕೆ.ಜಿ.ಎಫ್. ನ ಗುಡ್‌ಶಪರ್ಡ್ ಶಾಲಾಆವರಣದಲ್ಲಿ ತೃತೀಯ ಸೋಪಾನದ ಶಿಬಿರವನ್ನು ನಡೆಸಲಾಯಿತು. ಶಿಬಿರದ ನಾಯಕರಾಗಿ ಶ್ರೀ ಸಂಪತ್ ಕುಮಾರ್ ಶ್ರೀಮತಿ ವಿನಾಸ್ ಸಹನಾಯಕರಾಗಿ ಶ್ರೀ ರಜ್ವಿಸ್‌ಪಾರ್ ಲೂಯಿಸ್, ರಜನಿ, ರಚನ್‌ದಾಸ್, ಶ್ರೀ ವೆಂಕಟಾಚಲಪತಿ, ಸುಷ್ಮ, ಲಕ್ಷ್ಮಿಬಾಯಿ ವಿ.ಬಾಬು ರವರುಗಳು ಸೇವೆ ಸಲ್ಲಿಸಿದರು. ಈ ಶಿಬಿರದಲ್ಲಿ 465 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 16-08-2016 ರಂದು ಮುರಾರ್ಜಿ ದೇಸಾಯಿ ಸ್ಕೌಟ್ಸ್ ದಳದ ವತಿಯಿಂದ ರಾಮಸಮುದ್ರಂ ನಲ್ಲಿನ ಸರ್ಕಾರಿ ಆಸ್ಪತ್ರೆ ಆವರಣದಲ್ಲಿ ಸ್ವಚ್ಛತೆ ಹಾಗೂ 50 ಗಿಡಗಳನ್ನು ನೆಡಲಾಯಿತು. ಈ ಶಿಬಿರದಲ್ಲಿ ಶಾಲಾ ಪ್ರಾಂಶುಪಾಲರಾರದ ಶ್ರೀಮತಿ ಭರತಮ್ಮ ಗ್ರಾಮ ಪಂಚಾಯ್ತಿ ಅಧ್ಯಕ್ಷರು, ಸದಸ್ಯರು ಆಸ್ಪತ್ರೆಯ ವೈದ್ಯಾಧಿಕಾರಿಗಳು ಭಾಗವಹಿಸಿ ಶುಭಕೋರಿದರು.

* ದಿನಾಂಕ 19-08-2016 ರಂದು ಕೋಲಾರ ನಗರ ರವಿ ಬಿ.ಎಡ್., ಕಾಲೇಜಿನಲ್ಲಿ ಪದವಿ ಪೂರ್ವ ಕಾಲೇಜು ಉಪನ್ಯಾಸಕರಿಗೆ ಒಂದು ದಿನದ ಮಾಹಿತಿ ಶಿಬಿರ ನಡೆಸಲಾಯಿತು. ಈ ಶಿಬಿರಕ್ಕೆ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಚಿನ್ನಸ್ವಾಮಿರೆಡ್ಡಿ ರವರು ಆಗಮಿಸಿ ಮಾಹಿತಿಯನ್ನು ನೀಡಿದರು. ಈ ಸಂದರ್ಭದಲ್ಲಿ ಜಿಲ್ಲೆಯ ಉಪನ್ಯಾಸಕರು ಪದಾಧಿಕಾರಿಗಳು ಭಾಗವಹಿಸಿದ್ದರು.

ದಿನಾಂಕ : 20-8-2016 ರಂದು ರಾಷ್ಟ್ರೀಯ ಸದ್ಭಾವನಾ ದಿನಾಚರಣೆಯನ್ನು ಕೋಲಾರ ತಾಲ್ಲೂಕಿನ ನರಸಾಪುರದ ಪ್ರೇಮ್ ಸೇವಾನಗರ ವಿದ್ಯಾಲಯದಲ್ಲಿ ನಡೆಸಲಾಯಿತು. ಶಾಲೆಯ ಆಡಳಿತ ಅಧಿಕಾರಿಯಾದ ಶ್ರೀ ಕೃಪಾದಾಸ್, ಶ್ರೀ ಸಿ.ಜಿ. ಮುರಳಿ ರವರು ಭಾಗವಹಿಸಿದ್ದರು.

## ಮಂಡ್ಯ

ದಿನಾಂಕ : 20-08-2016 ರಂದು ಭಾರತದ ಮಾಜಿ ಪ್ರಧಾನಿ ರಾಜೀವ್ ಗಾಂಧೀಯವರ 72ನೇ ಜನ್ಮದಿನದ ಅಂಗವಾಗಿ ಸದ್ಭಾವನಾ ದಿನವನ್ನು ಕೆ.ಆರ್. ಪೇಟೆಯ ಆಶೀರ್ವಾದ ವಿದ್ಯಾಸಂಸ್ಥೆಯಲ್ಲಿ ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಸಿ. ಡೇಸಿರವರು ವಹಿಸಿದ್ದರು. ಧ್ವಜಾರೋಹಣದ ನಂತರ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಲಾಯಿತು. ಕಬ್ ಮಾಸ್ಟರ್ ರಾದ ಶ್ರೀಮತಿ ಶೋಭಾ ಮೇರಿ ಎಂ, ಸ್ಕೌಟ್ ಮಾಸ್ಟರ್‌ರಾದ ಶ್ರೀ ಹರೀಶ್ ಗೈಡ್ ಕ್ಯಾಪ್ಟನ್ ಶ್ರೀಮತಿ ಲತ ರವರು ಪ್ರಾರ್ಥನಾ ವಿಧಿಯನ್ನು ನಡೆಸಿಕೊಟ್ಟರು. ಅನಂತರ ಶ್ರೀಯುತ ಹರೀಶ್ ರವರು ದಿನದ ಮಹತ್ವವನ್ನು ತಿಳಿಸಿಕೊಟ್ಟರು. ನಂತರ ಸದ್ಭಾವನಾ ಪ್ರತಿಜ್ಞೆ ಸಿ. ಡೇಸಿರವರು ಸ್ಕೌಟ್-ಗೈಡ್‌ಗಳಿಗೆ ಬೋಧಿಸಿದರು.



ಅಂತಿಮವಾಗಿ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಒಟ್ಟಾಗಿ ಗಿಡ ನೆಡುವ ಮತ್ತು ಗಿಡಗಳಿಗೆ ನೀರುಣಿಸುವ ಕಾರ್ಯಕ್ರಮದಲ್ಲಿ ಪಾಲ್ಗೊಂಡರು.

* ದಿನಾಂಕ 09-08-2016 ರಂದು ಕಾವೇರಿ ಪ್ರೌಢಶಾಲೆ, ಶ್ರೀರಂಗಪಟ್ಟಣ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಶ್ರೀರಂಗಪಟ್ಟಣ ಇವರ ಸಂಯುಕ್ತಾಶ್ರಯದಲ್ಲಿ ಸ್ವಚ್ಛ ಭಾರತ್ ಅಭಿಯಾನದಡಿಯಲ್ಲಿ ಕಾರ್ಯಕ್ರವನ್ನು ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ ಮಾಸ್ಟರ್ ಶ್ರೀ ಪಾಪಣ್ಣ ಪಿ.ಆರ್. ರವರು ಕಾರ್ಯಕ್ರಮವನ್ನು ಆಯೋಜಿಸಿದ್ದರು. ಸಂಸ್ಥೆಯ ಮುಖ್ಯ ಶಿಕ್ಷಕರಾದ ಶ್ರೀ ಬಿ.ಎಂ. ಜಯಶೀಲರವರು ಸ್ಕೌಟ್‌ಗಳಿಗೆ ಸ್ವಚ್ಛ ಭಾತರದ ಅರಿವು ಮೂಡಿಸುವ ವಿಚಾರವಾಗಿ ಮಾರ್ಗದರ್ಶನ ನೀಡಿದರು. ಶಾಲಾ ಮಕ್ಕಳು ಸಂಸ್ಥೆಯ ಆವರಣ ಸ್ವಚ್ಛಗೊಳಿಸುವುದರ ಜೊತೆಗೆ ಗಿಡನೆಡುವ ಕಾರ್ಯಕ್ರಮವನ್ನು ನೆರವೇರಿಸಿದರು. ಕಾರ್ಯಕ್ರಮಕ್ಕೆ ಜಿಲ್ಲಾ ಸಂಘಟಕರಾದ ಶ್ರೀ ಬಿ.ಎಂ. ಲೋಕೇಶ್. ಶ್ರೀಮತಿ ಕೆ.ಎಂ. ನಾಗರತ್ನ ಹಾಗು ಶ್ರೀ ರವಿಶಂಕರ್ ರವರು ಮಾರ್ಗದರ್ಶನ ನೀಡಿದರು.

## ರಾಯಚೂರು

ದಿನಾಂಕ : 17-09-2016 ರಂದು 69ನೇ ಹೈದ್ರಾಬಾದ್ ಕರ್ನಾಟಕ ವಿಮೋಚನಾ ದಿನಾಚರಣೆಯ ಅಂಗವಾಗಿ ಜಿಲ್ಲಾ ಪೊಲೀಸ್ ಪರೇಡ್ ಮೈದಾನದಲ್ಲಿ ನಡೆದ ಸಾಮೂಹಿಕ ಧ್ವಜಾರೋಹಣವನ್ನು ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಹಾಗು ರಾಯಚೂರು ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ತನ್ವೀರ್ ಸೇಠ್ ರವರು ನೆರವೇರಿಸಿದರು. ನಂತರ ಅವರು ವಿವಿಧ ತಂಡಗಳಿಂದ ಗೌರವ ವಂದನೆಯನ್ನು ಸ್ವೀಕರಿಸಿದರು. ಪಥಸಂಚಲನದಲ್ಲಿ ಭಾಗವಹಿಸಿದ ಸರಕ್ಕಾರಿ ಪ್ರೌಢಶಾಲೆ ಜಹೀರಾಬಾದ್, ರಾಯಚೂರು, ಸೇಂಟ್ ಮೇರಿಜ್ ಕಾನ್ವೆಂಟ್ ಶಾಲೆ, ಗೈಡ್ ತಂಡ ಹಾಗೂ ಸರಕಾರಿ ಮಾದರಿಯ ಹಿರಿಯ ಪ್ರಾಥಮಿಕ ಶಾಲೆ, ಪೊಲೀಸ್ ಕಾಲೋನಿ ಗೈಡ್ ತಂಡಗಳು ಉತ್ತಮ ಪ್ರದರ್ಶನ ನೀಡಿದ್ದಕ್ಕಾಗಿ ಮಾನ್ಯ ಸಚಿವರು ಪ್ರಶಸ್ತಿ ಪತ್ರಗಳನ್ನು ಹಾಗು ಟ್ರೋಫಿಯನ್ನು ನೀಡಿದರು.

* ದಿನಾಂಕ 16-09-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ, ಜಿಲ್ಲಾ ಸಂಸ್ಥೆ ರಾಯಚೂರು ಹಾಗೂ ಸ್ಥಳೀಯ ಸಂಸ್ಥೆ ಸಿಂಧನೂರು ಇವರುಗಳ ಸಹಯೋಗದಲ್ಲಿ ಸರ್ಕಾರಿ ಪದವಿ ಮಹಾವಿದ್ಯಾಲಯ ಸಿಂಧನೂರಿನಲ್ಲಿ ಹಮ್ಮಿಕೊಂಡಿದ್ದ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್ ನಿಪುಣ್ ಪರೀಕ್ಷಾ ಶಿಬಿರವನ್ನು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಶರಣೇಗೌಡ ಉದ್ಘಾಟಿಸಿದರು. ಶಿಬಿರದ ನಾಯಕರಾಗಿ ಶ್ರಿ ಗಣಪತಿ ಎಮ್. ರೋವರ್ ಲೀಡರ್ ಹಾಗೂ ಶ್ರೀಮತಿ ಆಲೀಯಾ ಖಾನಂ ರೇಂಜರ್ ಲೀಡರ್ ಇವರುಗಳು ಕಾರ್ಯನಿರ್ವಹಿಸಿದರು. ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಆರ್.ಸಿ. ಪಾಟೀಲ್ ಸಿಂಡಿಕೇಟ್ ವಿಜಯಪುರ್ ಮಹಿಳಾ ವಿಶ್ವವಿದ್ಯಾಲಯ ಇವರು ಉದ್ಘಾಟಿಸಿದರು.

ದಿನಾಂಕ 18-09-2016 ರಂದು ಶಿಬಿರದ ಸಮಾರೋಪ ಸಮಾರಂಭದಲ್ಲಿ ಶಿಬಿರ ನಾಯಕರಾದ ಶ್ರೀ ಎಂ. ಗಣಪತಿ ಎ.ಎಲ್.ಟಿ. (ರೋ) ಇವರು ಶಿಬಿರ ವರದಿಯನ್ನು ನೀಡಿದರು. ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಸ್. ಶರಣೇಗೌಡ ಮುಖ್ಯ ಅತಿಥಿಗಳಾಗಿ ಮಾತನಾಡಿದರು. ಅಧ್ಯಕ್ಷತೆ ವಹಿಸಿ ಮಾತನಾಡಿದ ಶ್ರೀ ಪ್ರಹ್ಲಾದ್ ರೆಡ್ಡಿ. ಪ್ರಾಚಾರ್ಯರು, ಸ್ಕೌಟ್-ಗೈಡ್ ಚಳುವಳಿಯು ವಿಶ್ವದ ಯುವಶಕ್ತಿಯನ್ನು ಶಿಸ್ತಿನ ಸಿಪಾಯಿಗಳನ್ನಾಗಿ ಮಾಡಲು ಸಹಾಯಕ ಎಂದರು. ಈ ಸಮಾರಂಭದಲ್ಲಿ ಶ್ರೀಮತಿ ಆಲಿಯಾ ಖಾನಂ, ಶ್ರೀಮತಿ ಶೀಲಾಕುಮಾರಿ ದಾಸ್, ಶ್ರೀ ಆರ್.ಸಿ. ಪಾಟೀಲ್, ಖಾದರ್ ಭಾಷ, ಶ್ರೀ ವೆಂಕಟರಮಣ, ಬಾಲಪ್ಪ, 69 ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಕಾರ್ಯಕ್ರಮವನ್ನು ಶ್ರೀಮತಿ ಸುನೀತಾ ರೇಂಜರ್ ಲೀಡರ್ ಇವರು ನಿರೂಪಿಸಿದರು. ಶ್ರೀ ವಿಶ್ವನಾಥಗೌಡ ವಂದಿಸಿದರು.

*ದಿನಾಂಕ 21-09-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಸ್ಕೌಟ್ ಭವನದಲ್ಲಿ "ಅಂತರರಾಷ್ಟ್ರೀಯ ಶಾಂತಿ ದಿನ"ವನ್ನು ಆಚರಿಸಲಾಯಿತು. ಈ ದಿನಾಚರಣೆಯ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಚರ್ಚಾಸ್ಪರ್ಧೆ ಏರ್ಪಡಿಸಲಾಗಿತ್ತು.

ಶ್ರೀ ಅಮರೇಗೌಡ ಪಾಟೀಲ್, ಉಪನ್ಯಾಸಕರು ಹಾಗೂ ಜಿಲ್ಲಾ ಆಯುಕ್ತರು (ಸ್ಕೌಟ್) ಇವರು ಮಾತನಾಡಿ, ಜಗತ್ತಿನಲ್ಲಿ ಅತೀ ಜಾಣವಾದ ಪ್ರಾಣಿಗಳಲ್ಲಿ ಒಂದಾದ ಪ್ರಾಣಿ ಎಂದರೆ ಮನುಷ್ಯಪ್ರಾಣಿ ಎಂದು ಹೇಳುತ್ತೇವೆ. ಮನುಷ್ಯನ ಬಾಹ್ಯ ಶೃಂಗಾರಕ್ಕಿಂತ ಆಂತರಿಕ ಶೃಂಗಾರವು ಶಾಶ್ವತವಾದದ್ದು, ಆಂತರಿಕ ಶೃಂಗಾರ ನಮಗೂ ಮತ್ತು ಸಮಾಜಕ್ಕೂ ಹಿತಕರ. ಇದಕ್ಕೆ ಉದಾಹರಣೆ ಎಂದರೆ, ಮಹಾತ್ಮಾ ಗಾಂಧಿಜೀ, ಮದರ ಥೆರೇಸಾ, ಸ್ವಾಮಿ ವಿವೇಕಾನಂದ, ಎ.ಪಿ.ಜೆ. ಅಬ್ದುಲ್ ಕಲಾಂನಂಥವರು. ಅವರ ತತ್ವ, ಉದ್ದೇಶ, ಶಾಂತಿಯ ಸಂದೇಶಗಳು, ಅವರ ಆಚಾರ - ವಿಚಾರಗಳು ಇವತ್ತು ಜಗತ್ತಿಗೆ ಮಾದರಿಯಾಗಿವೆ ಎಂದರು.

ಪ್ರಾಸ್ತಾವಿಕವಾಗಿ ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಇವರು ಮಾತನಾಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿ ಮಾತನಾಡಿ, ಇವತ್ತಿನ ಜಗತ್ತಿನಲ್ಲಿ ಬಹಳಷ್ಟು ಅಶಾಂತತೆ ತಾಂಡವಾಡುತ್ತಿರುವ ದಿನಗಳಲ್ಲಿ ನಾವುಗಳು ಶಾಂತತೆಯನ್ನು ಸಾರುವುದು ಅನಿವಾರ್ಯವಾಗಿದೆ. ಸಮಾಜ, ದೇಶ, ಜಗತ್ತು ಶಾಂತವಾಗಿದ್ದರೆ ಸಮೃದ್ಧವಾದ ಬದುಕು ಸಾರ್ಥಕವಾಗಲಿದೆ ಎಂದು ಅಭಿಪ್ರಾಯ ಪಟ್ಟರು. ಈ

ಸಂದರ್ಭದಲ್ಲಿ ಶ್ರೀ ಹೆಚ್. ಹನುಮಂತಪ್ಪ ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಎಸ್. ಗೋವಿಂದರಾಜು, ಶ್ರಿ ಆರ್.ಹೆಚ್. ಸಾಗರ, ಶ್ರೀ ವಿಶ್ವನಾಥಗೌಡ, ಶ್ರೀಮತಿ ಗೀತಾ ಉಪಸ್ಥಿತರಿದ್ದರು. ವಿವಿಧ ಶಾಲೆಯ 100ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 15-08-2016 ರಂದು ರಾಯಚೂರು ನಗರದ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಪ್ರಧಾನ ಕಾರ್ಯಾಲಯದಲ್ಲಿ 70ನೇ ಸ್ವಾತಂತ್ರ್ಯೋತ್ಸವ ದಿನಾಚರಣೆಯ ಅಂಗವಾಗಿ ರಾಷ್ಟ್ರಧ್ವಜಾರೋಹಣವನ್ನು ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಇವರು ನೆರವೇರಿಸಿದರು. ನಂತರ ಅವರು ಮಾತನಾಡಿ, ದೇಶಬಾಂಧವರೆಲ್ಲ ಮುಂದಾಗಿ ದೇಶಪ್ರೇಮ ರಕ್ತದಲ್ಲಿ ಒಂದಾಗಿ ದೇಶಭಕ್ತರ ಪ್ರಾಣ, ತ್ಯಾಗ ಬಲಿದಾನದ ಫಲವೇ ಈ ನಮ್ಮ ಭವ್ಯ ಭಾರತ, ದೇಶ ಸ್ವಾತಂತ್ರ್ಯ ಪಡೆಯಬೇಕಾದರೆ ನಮ್ಮ ದೇಶದ ಅನೇಕ ಮಹಾತ್ಮರು ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಭವ್ಯ ಭಾರತಕ್ಕೆ ಸ್ವಾತಂತ್ರ್ಯ ದೊರಕಿಸಿ ಕೊಟ್ಟಿರುತ್ತಾರೆ. ಆದ್ದರಿಂದ ನಾವೆಲ್ಲರು ಇಂದು ಸಂತೋಷದಿಂದ ಬಾಳಲು ಸಾಧ್ಯವಾಗಿದೆ ಎಂದರು.

ನಂತರ ಜಿಲ್ಲಾ ಪೊಲೀಸ್ ಪರೆಡ್ ಮೈದಾನದಲ್ಲಿ ನಡೆದ ಸಾಮೂಹಿಕ ಧ್ವಜಾರೋಹಣವನ್ನು ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಹಾಗು ರಾಯಚೂರು ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ತನ್ವೀರ್ ಸೇಠ್ ರವರು ನೆರವೇರಿಸಿದರು. ನಂತರ ಅವರು ವಿವಿಧ ತಂಡಗಳಿಂದ ಗೌರವ ವಂದನೆಯನ್ನು ಸ್ವೀಕರಿಸಿದರು. ಪಥಸಂಚಲನದಲ್ಲಿ ಭಾಗವಹಿಸಿದ ಸರಕಾರಿ ಪ್ರೌಢ ಶಾಲೆ ಜಹೀರಬಾದ್, ರಾಯಚೂರು, ಗೈಡ್ಸ್ ತಂಡವು ಉತ್ತಮ ಪ್ರದರ್ಶನ ನೀಡಿ ಪ್ರಥಮ ಸ್ಥಾನವನ್ನು ಪಡೆದರೆ, ಸೇಂಟ್ ಮೇರಿಸ್ ಕಾನ್ವೆಂಟ್ ಶಾಲೆಯ ಗೈಡ್ ತಂಡ ಹಾಗೂ ಸರಕಾರಿ ಮಾದರಿಯ ಹಿರಿಯ ಪ್ರಾಥಮಿಕ ಶಾಲೆ, ಪೊಲೀಸ್ ಕಾಲೋನಿ ಗೈಡ್ ತಂಡಗಳು ಸಮಾದಾನಕರ ಪ್ರಶಸ್ತಿಗಳನ್ನು ಪಡೆದರು.

## ಶಿವಮೊಗ್ಗ



ದಿನಾಂಕ 08-09-2016 ರಿಂದ 10-09-2016 ರ ವರೆಗೆ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್ ನಿಪುಣ್ ಪರೀಕ್ಷಾ ಶಿಬಿರ ಮತ್ತು ಪದಕ ತರಬೇತಿ ಶಿಬಿರವನ್ನು ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು. ನಿಪುಣ್ ರೋವರ್ ಪರೀಕ್ಷಾ ಶಿಬಿರಕ್ಕೆ ಶ್ರೀ ರಾಜೇಶ ಅವಲಕ್ಕಿ ಎ.ಎಲ್.ಟಿ. (ಆರ್.), ನಿಪುಣ್ ರೇಂಜರ್ ಪರೀಕ್ಷಾ ಶಿಬಿರಕ್ಕೆ ಶ್ರೀಮತಿ ಭಾರತಿ ಡಯಾಸ್, ಎ.ಎಲ್.ಟಿ. (ಜಿ.), ಪದಕ ತರಬೇತಿ ಶಿಬಿರದ ರೋವರ್ ವಿಭಾಗಕ್ಕೆ ಶ್ರೀ ಎಮ್. ಗಣಪತಿ, ಎ.ಎಲ್.ಟಿ. (ಆರ್.), ರೇಂಜರ್ ವಿಭಾಗಕ್ಕೆ ಶ್ರೀಮತಿ ಭಾರತಿ ಡಯಾಸ್, ಎ.ಎಲ್.ಟಿ. (ಜಿ.) ರವರುಗಳು ನಾಯಕತ್ವ ವಹಿಸಿದ್ದರು.

ಸಂಜೆ 5.00 ಗಂಟೆಗೆ ಉದ್ಘಾಟನಾ ಸಮಾರಂಭ ನಡೆಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿರವರು ಶಿಬಿರವನ್ನು ಉದ್ಘಾಟಿಸಿ ಮಾತನಾಡುತ್ತಾ ತಾವೆಲ್ಲರು ಈ ಶಿಬಿರಕ್ಕೆ ಬಂದು ಇಲ್ಲಿಯ ಪರೀಕ್ಷೆಯನ್ನು ಧೈರ್ಯವಾಗಿ ಎದುರಿಸಿ ಮುಂದಿನ ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಪುರಸ್ಕಾರ ಪ್ರಶಸ್ತಿಯನ್ನು ಪಡೆದು, ಜಿಲ್ಲೆಗೆ ಗೌರವ ತರುವಂತಹವರಾಗಿ ಎಂದು ಹಾರೈಸಿದರು. ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಎಸ್.ಆರ್. ವಿಜಯಲಕ್ಷ್ಮಿ ಹಾಗೂ ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ ರವರು ಉಪಸ್ಥಿತರಿದ್ದರು. ಸ್ವಾಗತವನ್ನು ಡಿ.ಟಿ.ಸಿ. ಶ್ರಿ ರಾಜೇಶ ರವರು ನಿರ್ವಹಿಸಿದರೆ, ಶ್ರೀಮತಿ ಭಾರತಿ ಡಯಾಸ್, ರವರು ಬಂದಂತಹ ಗಣ್ಯ ವ್ಯಕ್ತಿಗಳನ್ನು ವಂದಿಸಿದರು. ರಾತ್ರಿ ಶಿಬಿರಾಗ್ನಿ ಕಾರ್ಯಕ್ರಮಕ್ಕೆ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಉಮೇಶ ಶಾಸ್ತ್ರಿಯವರು ಆಗಮಿಸಿ ಶಿಬಿರಾಗ್ನಿಯನ್ನು ಉದ್ಘಾಟಿಸಿ ಮಾತನಾಡಿ ಎಲ್ಲರಿಗೂ ಶುಭಕೋರಿದರು.

ದಿನಾಂಕ : 10-09-2016 ರಂದು ಬೆಳಗ್ಗೆ 7.00 ಗಂಟೆಗೆ ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳಲಾಯಿತು. ಮದ್ಯಾಹ್ನ 12.30 ಗಂಟೆಗೆ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಎಸ್.ಆರ್. ವಿಜಯಲಕ್ಷ್ಮೀ ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ ಭೇಟಿ ಮಾಡಿ ಶುಭಕೋರಿದರು.

## ತುಮಕೂರು

ದಿನಾಂಕ 24-08-2016 ರಂದು ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಆಯೋಜಿಸಲಾಗಿತ್ತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಆಶಾ ಪ್ರಸನ್ನಕುಮಾರ್ ವಹಿಸಿದ್ದರು. ಇದೇ ಸಂದರ್ಭದಲ್ಲಿ ಸ್ಕೌಟ್ ಆಯುಕ್ತರಾದ ಶ್ರೀ ಬಿ.ಆರ್. ವೇಣುಗೋಪಾಲಕೃಷ್ಣ, ಗೈಡ್ ಆಯುಕ್ತರಾದ ಶ್ರೀಮತಿ ಸುಭಾಷಿಣಿ ಕಾರ್ಯದರ್ಶಿಗಳಾದ ಶ್ರೀ ಸುರೇಂದ್ರಷಾ, ರಾಜ್ಯ ಸಂಸ್ಥೆಯಿಮದ ಆಗಮಿಸಿದ್ದ ಲೀಡರ್ ಟ್ರೈನರ್ ಶ್ರೀಮತಿ ಶಾಂತಾ ಕೂಡ ಉಪಸ್ಥಿತರಿದ್ದು, ತಿಪಟೂರಿನ ಲೀಡರ್ ಟ್ರೈನರ್ ಶ್ರೀ ಟಿ.ಸಿ. ಗಂಗಾಧರ್ ಹಾಜರಿದ್ದರು. ಜಿಲ್ಲಾ ಟ್ರೈನಿಂಗ್ ಕಮೀಷನರ್ ಶ್ರೀ ಬಿ.ಟಿ. ಸಿಂಧಗೀಕರ್ ಎಲ್ಲರನ್ನು ಸ್ವಾಗತಿಸಿದರು. ಶ್ರೀ ಗಂಗಯ್ಯ ಎ.ಡಿ.ಸಿ., ವಂದನೆ ಹೇಳಿದರು. 39 ಸ್ಕೌಟರ್ಸ್ 24 ಗೈಡರ್ಸ್‌ಗಳು ಹಾಗೂ ಕಬ್ಸ್, ಬುಲ್ ಬುಲ್ ಶಿಕ್ಷಕರೂ ಹಾಜರಿದ್ದರು.





Sri S.C. Burman, I.P.S, D.G.P.,
Sri Jaya Prakash Hegde, Former Minister &
Sri P.G.R. Sindhia, Hon'ble Minister
& Present State Chief Commissioner
BS&G, Karnataka
with Saint Mother Teresa
when She visited Mangalore in 1995



Sri P.G.R. Sindhia, Hon'ble Minister
Present State Chief Commissioner of
BS&G, Karnataka, Smt. Geetha Sindhia
and Sri Sri. Jaffer Sharief,
Hon'ble Union Minister
with Saint Mother Teresa
at Bangalore during1995.



ಸೆಪ್ಟೆಂಬರ್ 20 ರಿಂದ 24ರವರೆಗೆ ಧಾರವಾಡದಲ್ಲಿ ನಡೆದ ಪ್ರೇರಣಾ ಕಾರ್ಯಕ್ರಮದಲ್ಲಿ ರೇಂಜರ್ಸ್‌ಗಳು ಯೋಗಾಭ್ಯಾಸದಲ್ಲಿ ಪಾಲ್ಗೊಂಡಿರುವುದು.



ಆಗಸ್ಟ್ 8ರಂದು ರಾಜ್ಯ ತರಬೇತಿ ಕೇಂದ್ರ ಕೊಂಡಜ್ಜಿಯಲ್ಲಿ ರೋವರ್ಸ್–ರೇಂಜರ್ಸ್ ಪದಕ ತರಬೇತಿ ಶಿಬಿರದಲ್ಲಿ ನಡೆದ "ರಕ್ಷಾ ಬಂಧನ" ಕಾರ್ಯಕ್ರಮದಲ್ಲಿ ಪಾಲ್ಗೊಂಡ ರೋವರ್–ರೇಂಜರ್‌ಗಳು.




ಕೋಲಾರದಲ್ಲಿ ಜರುಗಿದ ಅಂತರಾಷ್ಟ್ರೀಯ ಶಾಂತಿ ದಿನಾಚರಣೆ ಕಾಯಕ್ರಮದಲ್ಲಿ ಪಾಲ್ಗೊಂಡ ರೋವರ್ಸ್–ರೇಂಜರ್ಸ್‌ಗಳು.




ಉಡುಪಿಯಲ್ಲಿ ಜರುಗಿದ ಅಂತರಾಷ್ಟ್ರೀಯ ಶಾಂತಿ ದಿನಾಚರಣೆ ಕಾಯಕ್ರಮದಲ್ಲಿ ಪಾಲ್ಗೊಂಡ ಸ್ಕೌಟ್ಸ್–ಗೈಡ್ಸ್‌ಗಳು.



ಕಾರವಾರ ಜಿಲ್ಲೆ ಹೊನ್ನಾವರದ ಮಾರ್ಥೋಮ ಶಾಲೆಯ ಪ್ರಾಂಶುಪಾಲ ರೆವರೆಂಡ್ ಫಾದರ್ ಜಾನ್ ಪಿ. ಜಾಯ್‌ಅವರಿಗೆ ಕಬ್ಸ್–ಬುಲ್‌ಬುಲ್ಸ್, ಸ್ಕೌಟ್ಸ್–ಗೈಡ್ಸ್‌ಗಳು ರಾಷ್ಟ್ರಧ್ವಜವನ್ನು ಶಾಲೆಗೆ ನೀಡಿದರು.



ರಾಯಚೂರಿನಲ್ಲಿ ಜರುಗಿದ ಸ್ವಚ್ಛ ಭಾರತ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್–ಗೈಡ್ಸ್‌ಗಳು, ದಳ ನಾಯಕರು ಮತ್ತು ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.

**Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17**
**Permitted to Post under WPP System Vide No.: WPP-340**
**Posted at: Bengaluru PSO, Mysore Road, Bengaluru-26 on 28 & 30 every Month (No. of Pages: 04+28 = 32)**



ಸೆಪ್ಟೆಂಬರ್ 27ರಂದು ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ 17ನೇ ರಾಷ್ಟ್ರೀಯ ಜಾಬೋರಿ ಪೂರ್ವಸಿದ್ಧತೆಯ ಬಗ್ಗೆ ಡಾ. ಎಚ್.ಸಿ. ಮಹಾದೇವಪ್ಪ, ಮಾನ್ಯ ಲೋಕೋಪಯೋಗಿ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ನೆಡೆಯಿತು. ಶ್ರೀ ವಾಸು, ಮಾನ್ಯ ಶಾಸಕರು, ಶ್ರೀ ರಣದೀಪ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಡಾ. ಪಿ.ಸಿ. ಜಾಫರ್, ಭಾ.ಆ.ಸೇ., ರಾಷ್ಟ್ರೀಯ ಜಾಂಬೋರಿ ಸಮನ್ವಯ ಅಧಿಕಾರಿಗಳು, ಶ್ರೀ ರವಿಚೆನ್ನನ್, ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಶ್ರೀ ಟಿ. ವೆಂಕಟೇಶ್, ಅಪರ ಜಿಲ್ಲಾಧಿಕಾರಿಗಳು, ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು(ಸ್ಕೌ) ಹಾಗೂ ಇತರರು ಚಿತ್ರದಲ್ಲಿದ್ದಾರೆ.







ಸೆಪ್ಟೆಂಬರ್ 24ರಂದು ಬೆಂಗಳೂರು ಬಿ.ಬಿ.ಎಂ.ಪಿ. ಕಛೇರಿಯಲ್ಲಿ ಜರುಗಿದ ಸಮಾರಂಭದಲ್ಲಿ ಬೆಂಗಳೂರು ನಗರದ ಕಾರ್ಪೋರೇಷನ್ ಶಾಲೆಗಳಲ್ಲಿ ದಳಗಳನ್ನು ಪ್ರಾರಂಭಿಸಿ ರಾಜ್ಯ ಸಂಸ್ಥೆಯಿಂದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳಿಗೆ ಸಮವಸ್ತ್ರಗಳನ್ನು ವಿತರಿಸಲಾಯಿತು. ಶ್ರೀ ಬಿ.ಎನ್. ಮಂಜುನಾಥ ರೆಡ್ಡಿ, ಪೂಜ್ಯ ಮಹಾಪೌರರು, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಆರ್.ಎಸ್. ಸತ್ಯನಾರಾಯಣ, ಆಡಳಿತ ಪಕ್ಷದ ನಾಯಕರು, ಶ್ರೀ ಪದ್ಮನಾಭ ರೆಡ್ಡಿ, ವಿರೋಧ ಪಕ್ಷದ ನಾಯಕರು, ಶ್ರೀ ಎನ್. ಮಂಜುನಾಥ ಪ್ರಸಾದ್, ಭಾ.ಆ.ಸೇ, ಆಯುಕ್ತರು, ಶ್ರೀ ಎಂ. ಆನಂದ್, ಜೆ.ಡಿ.ಎಸ್. ಪಕ್ಷದ ನಾಯಕರು, ಶ್ರೀ ಎಸ್.ಜಿ. ರವೀಂದ್ರ, ವಿಶೇಷ ಆಯುಕ್ತರು ಚಿತ್ರದಲ್ಲಿದ್ದಾರೆ.



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26